ಮನವು ಕಡಲಂತೆ ಸುವಿಚಾರ ತೆರೆಯಂತೆ ಜಾ।
ತಿಂಗೆ ವಡಬಾನಲದ ಹರಿಯಂತೆ ಭಾರತದ।
ಸುಖದುಃಖ ಭರತ ಇಳಿತಗಳಂತೆ ಸುಗುಣರ।
ತ್ನಂಗಳಲಿ ರತ್ನಾಕರೇಶ್ವರನ ಪರಿಯಂತೆ।
ಜ್ಞಾನ ಸಾಗರನಂತೆ ಶ್ರೀಜವಾಹರರ ಚರಿ।
ತೆಯು ಹಿರಿಜಲಧಿಯಂತೆ; ಇದು ತುಂತುರುವಿನಂತೆ;
ಕಿರಿತನವು ಬಲು ಕಷ್ಟ! ಆ ಹಿರಿತನಕೆ ಬಂದ।
ಈ ಕಿರಿತನವು ಕ್ಷಮ್ಯವಲ್ತೆ?

ಮಣಿಪುರ,
—3—1952.

ನ,ಕರು ಮತ್ತು ಪ್ರಕಾಶಕರು - ಕಲ್ಯಾಣಪುರ ಪ್ರೆಸ್, ಲಿ., ಉಡುಪಿ.

# ಪರಿವಿಡಿ ಮತ್ತು ಮಾದರಿ ಪ್ರಶ್ನೆಗಳು.



೧. **ಹಿರಿಯರು**— ನೆಹರು ಕುಟುಂಬದವರಿಗೆ 'ನೆಹರು'ವೆಂದು ಹೆಸರು ಬರಲು ಕಾರಣವೇನು? (2) ರಾಜಕೌಲನು ಡಿಲ್ಲಿಗೆ ಬಂದು ನೆಲೆನಿಂತುದು ಯಾಕೆ?

೨. **ತಂದೆ ಮೋತಿಲಾಲನೆಹರು:**— ಮೋತೀಲಾಲರು ಲಂಡನಿನಿಂದ ಮಗಳಿಗೆ ಅಂಗಿ ತಂದ ವಿಷಯವನ್ನು ವಿವರಿಸು. (2) ''ಅವರು ದೇಶಸೇವೆಯಲ್ಲಿ ಹಿಂದಿರಲಿಲ್ಲ" ವೆಂಬುದಕ್ಕೆ ಕಾರಣ ಕೊಡು.

೩. **ತಾಯಿ—ಸ್ವರೂಪರಾಣಿದೇವಿ:**— ನೆಹರುಗಳ ತಾಯಿಗೆ ಲಾತೀ ಪೆಟ್ಟುಗಳು ಬೀಳಲು ಕಾರಣವೇನು? (2) "ಇಂತಹ ಸಹೋದರಿಯರು ಅಪರೂಪ" ಯಾಕೆ?

೪. **ಪತ್ನಿ ಕಮಲಾದೇವಿ:**—"ಸರಕಾರಕ್ಕೆ ಯಾವ ಭರವಸೆಯನ್ನು ಕೊಡಬೇಡಿರಿ" ಇದು ಯಾರು ಹೇಳಿದ ಮಾತು?

೫. **ಸಹೋದರಿಯರು ಮತ್ತು ಮಗಳು:**— ಜವಾಹರಲಾಲರ ಸಹೋದರಿಯರ ಮತ್ತು ಮಗಳ ಹೆಸರೇನು?

೬. **ಬಾಲ್ಯದ ವಿದ್ಯಾಭ್ಯಾಸ:**— ಜವಾಹರಲಾಲರ ಬಾಲ್ಯದ ಪ್ರೀತಿಯ ಗುರು ಯಾರು? ಇಂಗ್ಲೆಂಡಿನಲ್ಲಿ ಅವರು ಕಲಿತ ಶಾಲೆಗಳು ಯಾವುವು?

೭. **ಜೈಲುವಾಸ**— ನೆಹರುಗಳ ಮೊದಲನೆಯ ಬಂಧನ ಯಾವಾಗ ಮತ್ತು ಎಲ್ಲಿ? ನೆಹರುಗಳ ಕೈಗೆ ಬೇಡಿ ಹಾಕಿದುದೇಕೆ?

೮. **ಲಾತೀ ಬಡಿತ:**— ಸೈಮನ್ ಸಮಿತಿ ಎಂದರೇನು? ನೆಹರುಗಳನ್ನು ಲಾತೀ ಬಡಿತಗಳಿಂದ ಹೇಗೆ ತಪ್ಪಿಸಿದರು?

೯. **ಶಿಸ್ತು ಸಾಹಸಗಳ ಜೀವನ:**— ''ಸ್ವತಹಾ ಜವಾಹರಲಾಲರು ಗಾಳಿ ಹಾಕಿದರು"ಯಾರಿಗೆ? ನೆಹರುಗಳು ಶಿಸ್ತುಪ್ರಿಯರು ಎಂಬುದಕ್ಕೆ ದೃಷ್ಟಾಂತ ಕೊಡು.

೧೦. **ಭಾರತಭಾಗ್ಯವಿಧಾತ:**— ನೆಹರುಗಳು ಕೇಂದ್ರ ಸಭೆಗೆ ಉಮೇದ್ವಾರರಾಗಿ ನಿಂತು ಗೆದ್ದುದು ಯಾವ ಮತದಾರ ಕ್ಷೇತ್ರದಿಂದ?

# ಮೌನ ಓದಿನ ಕುರಿತು ಕೆಲವು ಸಲಹೆಗಳು

ನಾಲಗೆ ತುಟಿಗಳನ್ನಾಡಿಸದೆ ಕೇವಲ ಕಣ್ಣುಗಳ ಸಹಾಯದಿಂದ ಓದುವುದು ಮೌನ ಓದು. ನಿತ್ಯಜೀವನದಲ್ಲಿ ಮೌನ ಓದೇ ಹೆಚ್ಚು. ಈ ಅಭ್ಯಾಸವು ಬಾಲ್ಯದಲ್ಲೇ ಬೆಳೆದು ರೂಪುಗೊಳ್ಳಬೇಕು. ಸಾಮಾನ್ಯ ಓದುವಿನಲ್ಲಿರುವಂತೆ ಅರ್ಥಗ್ರಹಣ ಮತ್ತು ವೇಗ ಇವೆರಡು ಮುಖ್ಯಾಂಶಗಳು ಮೌನ ಓದುವಿನಲ್ಲಿಯೂ ಇವೆ. ಕೇವಲ ಕಣ್ಣಿನಿಂದ ಪುಸ್ತಕದ ಹಾಳೆಗಳನ್ನು ನೋಡುತ್ತಾ ಹೋದರೆ ಪ್ರಯೋಜನವಿಲ್ಲ. ಓದಿದ ವಿಷಯಗಳು ಗ್ರಹಿಸಲ್ಪಡಬೇಕು. ಹಾಗೆಯೇ ತಾಸಿಗೊಂದು ವಾಕ್ಯ ಓದಿಯೂ ಫಲವಿಲ್ಲ. ಮಟ್ಟಕ್ಕೆ ಸರಿಯಾದ ವೇಗವೂ ಇರಬೇಕು.

ಮೌನ ಓದಿನ ಮೊದಲ ಹೆಜ್ಜೆಯಲ್ಲಿ ಶಿಕ್ಷಕನು ಕರಿಹಲಗೆಯಲ್ಲಿ ಚಿಕ್ಕ ಚಿಕ್ಕ ವಾಕ್ಯಗಳನ್ನು ಬರೆಯುವುದು. ಉದಾ:- “ಆನಂದಾ, ನಿಲ್ಲು” “ಎಲ್ಲರೂ ಕನ್ನಡ ಪುಸ್ತಕದ 38ನೇ ಪುಟ ತೆರೆಯಿರಿ” ಇತ್ಯಾದಿ. ವಿದ್ಯಾರ್ಥಿಗಳು ಈ ವಾಕ್ಯಗಳನ್ನು ಮೌನವಾಗಿ ಓದಿ ಅವುಗಳಲ್ಲಿ ಸೂಚಿಸುವಂತೆ ಮಾಡುವುದು. ಹೀಗೆ ಮೌನ ಓದಿನ ಸಾಮಾನ್ಯ ಅಭ್ಯಾಸಗಳಾದ ಮೇಲೆ ಸುಮಾರು IV & V ನೇ ತರಗತಿಗಳಲ್ಲಿ ಈ ಪುಸ್ತಕವನ್ನುಪಯೋಗಿಸಿಕೊಳ್ಳಬಹುದು.

ತರಗತಿಯ ಪ್ರತಿ ವಿದ್ಯಾರ್ಥಿಗೆ ಈ ಪುಸ್ತಕದ ಒಂದೊಂದು ಪ್ರತಿಯನ್ನು ಒದಗಿಸಿಟ್ಟುಕೊಳ್ಳುವುದು. ಪಾಠ ಸಿದ್ಧತೆಯಲ್ಲಿ (1) ಓದುವ ಅಂಶ (2) ಓದುವ ಸಮಯ (3) ಪೀಠಿಕೆಯಲ್ಲಿ ಓದಲು ಅಭಿರುಚಿ ಹುಟ್ಟುವಂತೆ ಕಷ್ಟ ಶಬ್ದಗಳನ್ನು ತಿಳಿದುಕೊಳ್ಳಲು ಸೂಚನೆಗಳು (4) ನಿಶ್ಚಿತ ಸಮಯದಲ್ಲಿ ಪಂಜ್ತಿ ಓದಿರುವರೋ ಎಂದು ವೇಗ ನಿರ್ಣಯ (5) ಅರ್ಥವತ್ತಾಗಿ ಓದಿರುವರೋ ಎಂದು ತಿಳಿದುಕೊಳ್ಳಲು ಪ್ರಶ್ನೆಗಳು. ಇತ್ಯಾದಿಗಳನ್ನು ಮೊದಲೇ ನಿಶ್ಚಯಿಸಿಕೊಳ್ಳಬೇಕು. ಪ್ರಶ್ನೆಗಳ ಮಾದರಿಯಾಗಿ ಕೆಲವು ಪ್ರಶ್ನೆಗಳನ್ನು ಇಲ್ಲಿ ಕೊಟ್ಟಿದೆ. ಇವನ್ನು ಸರಿಕಂಡಂತೆ ಪರಿವರ್ತಿಸಿಕೊಳ್ಳುವುದೂ ಹೆಚ್ಚಿನ ಪ್ರಶ್ನೆಗಳನ್ನು ರಚಿಸಿಕೊಳ್ಳುವುದೂ ಜಾಣನಾದ ಶಿಕ್ಷಕನಿಗೆ ಕಷ್ಟವೆನಿಸಲಾರದು.



A·B·Niradha

# ಜವಾಹರಲಾಲ ನೆಹರು.



## ೧. ಹಿರಿಯರು.

'ಜವಾಹರಲಾಲ ನೆಹರು' ಈ ಹೆಸರನ್ನು ಕೇಳದವರಾರು? ಪ್ರತಿ ಭಾರತೀಯನ ಹೃದಯವೂ ಈ ಹೆಸರಿಗೆ ಅದೊಂದು ವಿಶೇಷ ರೀತಿಯ ಗೌರವವನ್ನು ಸಲ್ಲಿಸುತ್ತಿದೆ. ಹಿಂದೂದೇಶ ಮಾತ್ರವೇಕೆ ಪ್ರಪಂಚವೇ ಇಂದು ಜವಾಹರಲಾಲರನ್ನು ಮಹಾಪುರುಷನೆಂದು ಹೊಗಳುತ್ತದೆ. ಇವರ ಚಿತ್ರವಿಲ್ಲದ ಮನೆ, ಚಿತ್ರವನ್ನು ಕಂಡು ಹಿಗ್ಗದ ಜನ ಇಲ್ಲವೆಂದೇ ಹೇಳಬಹುದು.

ಈಗ ಹಿಂದೂದೇಶದ ಮುಖ್ಯ ಮಂತ್ರಿಯೂ ಕಾಂಗ್ರೆಸ್ ಸಭೆಯ ಅಧ್ಯಕ್ಷನೂ ಆಗಿರುವ ಜವಾಹರಲಾಲರು ಅರುವತ್ತೆರಡು ವರುಷ ದಾಟಿದ ಮುದುಕ. 1889ನೇ ನವಂಬರ ತಾರೀಕು 14ರಲ್ಲಿ ಹುಟ್ಟಿದರು. ಭರತ ಖಂಡದ ಸಿಂಹವೆಂದು ಹೆಸರು ಪಡೆದ ಮೋತೀಲಾಲರು ಇವರ ತಂದೆ. ತಾಯಿ ಸ್ವರೂಪರಾಣಿದೇವಿ. ಜಾತಿಯಲ್ಲಿ ಕಾಶ್ಮೀರೀ ಬ್ರಾಹ್ಮಣ.

ಅತ್ಯಂತ ಸೊಬಗಿನ ದೇಶವೆಂದು ಹೆಸರಾದ ಕಾಶ್ಮೀರವೇ ನೆಹರು ಮನೆತನದ ಮೂಲಸ್ಥಾನ. ಪಂಡಿತ್ ಎಂಬುದು ಕಾಶ್ಮೀರೀ ಬ್ರಾಹ್ಮಣರ ಬಿರುದು. ಔರಂಗಜೇಬನ ಆಳ್ವಿಕೆಯ ನಂತರ ಮೊಗಲ ಸಾಮ್ರಾಜ್ಯದ ಇಳಿಗಾಲವಾರಂಭವಾಯಿತಷ್ಟೆ! ಅವನ ನಂತರದ ಫರ್ರುಖ್‌ಸಿಯರ್ ಎಂಬ ಮೊಗಲ ಬಾದಶಹನೊಮ್ಮೆ ಕಾಶ್ಮೀರದ ಕಡೆಗೆ ತಿರುಗಾಡಲು ಹೋಗಿದ್ದನು. ಇದು ಇಂದಿಗೆ ಸುಮಾರು 250 ವರುಷಗಳ ಹಿಂದಿನ ಮಾತು. ನೆಹರು ಮನೆತನದ ಪಂಡಿತ ರಾಜಕೌಲ್ ಎಂಬವನು

ಬಾದಷಹನನ್ನು ಕಂಡನು. ರಾಜಕೌಲನು ಸಂಸ್ಕೃತ ಫಾರಸೀ ಭಾಷೆಗಳಲ್ಲಿ ವಿದ್ವಾಂಸನಾಗಿದ್ದನು. ಆತನ ವಿದ್ವತ್ತಿಗೆ ಬಾದಷಹನು ಮೆಚ್ಚಿದನು. 1716ರಲ್ಲಿ ರಾಜಕೌಲನು ಢಿಲ್ಲಿಗೆ ಬಂದು ನೆಲಸಿದನು. ಬಾದಷಹನು ಆತನಿಗೊಂದು ಚಿಕ್ಕ ಆಸ್ತಿ-ಮನೆಯನ್ನು ಕೊಟ್ಟನು. ಆ ಮನೆಯು ಒಂದು ಕಾಲುವೆಯ ಸಮೀಪವಿತ್ತು. ಕಾಲುವೆಗೆ ಆ ಭಾಷೆಯಲ್ಲಿ 'ನಹರ್' ಎಂದು ಹೆಸರು. ಪಂಡಿತ ರಾಜಕೌಲ್, ನಹರ್ ಎಂಬುದು ಪಂಡಿತ ರಾಜಕೌಲನ ವಿಳಾಸವಾಯಿತು. ಬರಬರುತ್ತಾ ನೆಹರು ಎಂಬುದು ಆ ಮನೆತನದ ಹೆಸರಾಗಿಯೇ ಉಳಿಯಿತು.

ಲಕ್ಷ್ಮೀನಾರಾಯಣ ನೆಹರು ಜವಾಹರಲಾಲರ ಪಿಜ್ಜ (ಅಜ್ಜನ ತಂದೆ). ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ವಕೀಲರಾಗಿದ್ದರು. ಅವರ ಮಗ ಗಂಗಾಧರ ನೆಹರು ಜವಾಹರಲಾಲ ನೆಹರುಗಳ ಅಜ್ಜ. ಡಿಲ್ಲಿಯಲ್ಲಿ ಕೊತವಾಲ ಕೆಲಸದಲ್ಲಿದ್ದರು. 1857ನೇ ಇಸವಿಯಲ್ಲಿ ನಡೆದ ಸಿಪಾಯಿ ದಂಗೆಯಿಂದ ನೆಹರು ಮನೆತನದ ಆಸ್ತಿ ಬದುಕುಗಳೆಲ್ಲವೂ ನಷ್ಟವಾದುವು. ಗಂಗಾಧರ ನೆಹರು ತನ್ನ ಕುಟುಂಬದೊಡನೆ ಆಗ್ರಾದ ಕಡೆಗೆ ಹೊರಟರು. 1861ನೇ ಇಸವಿಯಲ್ಲಿ ಆಗ್ರಾದಲ್ಲಿ ಗಂಗಾಧರ ನೆಹರುಗಳ ಮೂರನೆಯ ಮಗ ಜವಾಹರಲಾಲರ ತಂದೆ ಮೋತೀಲಾಲರು ಹುಟ್ಟಿದರು. ಬನ್ಸಿಧಾರ್ ನೆಹರು ಮತ್ತು ನಂದೀಲಾಲ ನೆಹರುಗಳೆಂದು ಮೋತೀಲಾಲರ ಅಣ್ಣಂದಿರ ಹೆಸರುಗಳು. ಬನ್ಸಿಧಾರ್ ನೆಹರುಗಳು ಬ್ರಿಟಿಷ್ ಸರಕಾರದ ಜಡ್ಜರಾಗಿದ್ದರು. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾಯಿಸಲ್ಪಡುತ್ತಿದ್ದರು. ಕಿರಿಯ ನಂದಿಲಾಲ ನೆಹರುಗಳು ರಜಪುತಾನದ ಕೇತ್ರಿ ಎಂಬ ಸಂಸ್ಥಾನದ ದಿವಾನರಾಗಿ ಹತ್ತು ವರುಷ ಕೆಲಸ ಮಾಡಿದ್ದರು. ನಂತರ ಆಗ್ರಾದಲ್ಲಿ ವಕೀಲ ವೃತ್ತಿಯನ್ನು ಮಾಡಿಕೊಂಡಿದ್ದರು. ಹೈಕೋರ್ಟು ಆಗ್ರಾದಿಂದ ಅಲಹಾಬಾದಿಗೆ ಹೋಗಲು ನಂದಾಲಾಲ ನೆಹರುಗಳು ಕೂಡಾ ಅಲಹಾಬಾದಿಗೆ ಹೋಗಿ ನೆಲಸಿದರು. ಮೋತೀಲಾಲ ನೆಹರುಗಳು ಅವರೊಟ್ಟಿಗೆ ಅಲಹಾಬಾದಿನಲ್ಲಿಯೇ ಬೆಳೆದರು. ನೆಹರು ಮನೆತನದ ಹಿರಿಯರ ಸಾಹಸಮಯ ಜೀವನವು ಹೊಗಳುವಂತಹದಲ್ಲವೆ?

## ೨. ತಂದೆ—ಮೋತೀಲಾಲ ನೆಹರು.

ಮೋತೀಲಾಲರು ಚಿಕ್ಕ ಪ್ರಾಯದಲ್ಲಿಯೇ ಅರಬಿ, ಫಾರ್ಸಿ ಭಾಷೆಗಳಲ್ಲಿ ಪ್ರವೀಣರಾದರು. ತರಗತಿಯಲ್ಲಿ ಎಲ್ಲರಿಗಿಂತಲೂ ಬುದ್ಧಿವಂತನೆನಿಸಿಕೊಳ್ಳಬೇಕೆಂಬುದೇ ಅವರ ಅಪೇಕ್ಷೆ. ಹೇಗಾದರೂ ಪಾಸಾದರೆ ಸರಿ, ಎಂಬ ಅಭಿಪ್ರಾಯ ಅವರಿಗೆ ಇರಲೇ ಇಲ್ಲ. ವಕೀಲ ವೃತ್ತಿ ನೆಹರು ಕುಟುಂಬದ ಮೆಚ್ಚಿನ ಉದ್ಯೋಗ. ವಕೀಲ ಪರೀಕ್ಷೆಯಲ್ಲಿ ಉತ್ತಮ ಸ್ಥಾನದಲ್ಲಿ ತೇರ್ಗಡೆಯಾದರು. ಸ್ವಲ್ಪ ಸಮಯದಲ್ಲಿಯೇ ಅಣ್ಣ ನಂದೀಲಾಲರು ತೀರಿ ಹೋದರು. ಕುಟುಂಬ ಪೋಷಣೆಯ ಎಲ್ಲಾ ಹೊರೆಯೂ ಅವರ ಮೇಲೆಯೇ ಬಿತ್ತು.

ಒಮ್ಮೆ ಗಾಂಧೀಜಿಯವರು ಮೋತೀಲಾಲರ ಪಟವೊಂದನ್ನು ನೋಡುತ್ತಾ ‘‘ಈತನು ಇಷ್ಟು ಜೋರಿನವನು ಎಂದು ನಾನು ತಿಳಿದಿರಲಿಲ್ಲ’’ ಎಂದಿದ್ದರು. ಪ್ರಾರಂಭದಲ್ಲಿ ಸ್ವರಾಜ್ಯ ಚಳವಳಿಯ ವಿಧಾನಗಳ ಕುರಿತು ಗಾಂಧಿಜಿಯವರಿಗೂ ಮೋತೀಲಾಲರಿಗೂ ವಿವಾದಗಳಿದ್ದುವು. ಮೋತಿಲಾಲರ ವಿರೋಧವು ಗಾಂಧೀಜಿಯವರಿಗೂ ಕಷ್ಟವೆನಿಸಿತ್ತು. ಸರಕಾರೀ ಅಧಿಕಾರಿಗಳಿಗೆ ಮೋತೀಲಾಲರು ಸಿಡಿಲಿನಂತಿದ್ದರು. ‘‘ಸ್ವರಾಜ್” ಪಕ್ಷವನ್ನು ಕಟ್ಟಿ ಸ್ವಾತಂತ್ರ್ಯಕ್ಕಾಗಿ ಪ್ರಯತ್ನಿಸುತ್ತಿದ್ದುದರಿಂದ ಸರಕಾರೀ ಅಧಿಕಾರಿಗಳಿಗೂ ಇವರಿಗೂ ಆಗಾಗ ತಿಕ್ಕಾಟವಾಗುವುದಿತ್ತು. ಲೋರ್ಡ್ ಹೈಲಿ ಎಂಬ ಬ್ರಿಟಿಷ್ ಅಧಿಕಾರಿಯು ಮೋತೀಲಾಲರೊಡನೆ ಹೊಯ್ದಾಡಿ ಸೋತು ಸುಣ್ಣವಾಗಿದ್ದನು. ಆತನಿಗೆ ಪಂಜಾಬಿಗೆ ವರ್ಗವಾಗಲು ‘‘ಸೈ, ಪಂಜಾಬಿನಲ್ಲಿ ಮೋತೀಲಾಲರಿಲ್ಲ ಬಚಾವಾದೆ” ಎಂದಿದ್ದನಂತೆ.

ಸ್ವಾತಂತ್ರ್ಯ ಚಳವಳಿಯು ವಿಶೇಷವಾಗುತ್ತಾ ಹೋಗಲು ತನ್ನ ವಕೀಲ ವೃತ್ತಿಯನ್ನೇ ಬಿಟ್ಟು ಬಿಟ್ಟರು. ವಕೀಲ ವೃತ್ತಿಯನ್ನು ಬಿಟ್ಟ ಮೇಲೆ ಹಿಂದಿನ ಕಕ್ಷಿಗಾರನೊಬ್ಬನು ಒಂದು ಲಕ್ಷ ರೂಪಾಯಿಗಳನ್ನು ಕೊಡುತ್ತೇನೆ, ತನ್ನ ವಕಾಲತು ಮಾಡಬೇಕು ಎಂದು ಬೇಡಿಕೊಂಡನು. ಲಕ್ಷ ರೂಪಾಯಿಗಳ ಕಡೆಗೆ ಅವರ ಲಕ್ಷ್ಯವೇ ಹೋಗಲಿಲ್ಲ. ‘‘ಒಮ್ಮೆ

ಮಾಡುವುದಿಲ್ಲವೆಂಬುದನ್ನು ದುಡ್ಡಿನ ಆಶೆಗಾಗಿ ಮತ್ತೊಮ್ಮೆ ಪ್ರಾರಂಭಿಸಲಾರೆ" ಎಂದು ಅವನನ್ನು ಕಳುಹಿಸಿಕೊಟ್ಟರು.

ರೂಪು ಆಕಾರ ಬಣ್ಣಗಳಲ್ಲಿ ತನ್ನ ತಂದೆಯು ರೋಮನ್ ಚಕ್ರವರ್ತಿಗಳಂತೆ ಕಾಣುತಿದ್ದರು ಎಂದು ಜವಾಹರಲಾಲರು ಹೇಳಿರುವರು. ಹತ್ತು ಮಂದಿಯ ಮಧ್ಯದಲ್ಲಿ ಅವರ ಶ್ರೇಷ್ಠ ಸ್ವರೂಪವು ಸ್ಪಷ್ಟವಾಗಿ ಎದ್ದು ಕಾಣುತಿತ್ತು. ಠೀವಿಯಲ್ಲಿಯೂ ಯಾವ ಮಹಾ ರಾಜನಿಗೂ ಕಡಿಮೆಯಲ್ಲದವನಂತೆ ವರ್ತಿಸುತಿದ್ದರು. 1926ರಲ್ಲಿ ಯುರೋಪಿಗೆ ಹೊರಟಿದ್ದ ಸಮಯ. ತನ್ನ ಇಪ್ಪತ್ತು ವರುಷದ ಮಗಳು ಕೃಷ್ಣೆಯೊಡನೆ "ಲಂಡನಿನಿಂದ ನಿನಗೇನು ತರಬೇಕು?" ಎಂದು ಕೇಳಿದರು. ''ಸಾಧ್ಯವಾದರೆ ಒಂದು ಚರ್ಮದ ಅಂಗಿ ತನ್ನಿರಿ'' ಎಂದಳು ಆಕೆ. ಲಂಡನಿನಲ್ಲಿ ದೊಡ್ಡ ಅಂಗಡಿಯೊಂದಕ್ಕೆ ಹೋಗಿ ''ಚರ್ಮದ ಅಂಗಿಗಳಿವೆಯೇ?" ಎಂದು ಕೇಳಿದರು. ಇವೆ ಎಂದು ತಿಳಿದೊಡನೆ ''ಅಂಗಡಿಯ ಮೆನೇಜರರನ್ನು ಕಾಣಬೇಕು" ಎಂದರು. ಮೆನೇಜರನು ಬರಲು "ನನ್ನ ಇಪ್ಪತ್ತು ವರುಷ ಪ್ರಾಯದ ಮಗಳಿಗೊಂದು ಅಂಗಿಬೇಕು, ನಿಮ್ಮ ಅಂಗಡಿಯಲ್ಲಿ ಕೆಲಸಕ್ಕಿರುವ ಇಪ್ಪತ್ತು ವರುಷ ಪ್ರಾಯದ ಹುಡುಗಿಯರೆಲ್ಲರನ್ನೂ ಸಾಲಾಗಿ ನಿಲ್ಲಿಸಿದರೆ ನನ್ನ ಮಗಳಂತಿರುವವಳನ್ನು ಕಂಡುಹಿಡಿದು ಒಂದು ಅಂದಾಜು ಅಳತೆಯನ್ನು ಹೇಳುವೆನು" ಎಂದರು. ಹಾಗೆಯೇ ಎಲ್ಲಾ ಹುಡುಗಿಯರೂ ಬಂದು ನಿಂತರು. ಮೋತೀಲಾಲರು ಅಂಗಿಯನ್ನು ಕೊಂಡುಕೊಂಡರು. ಜವಾಹರಲಾಲರಿಗೆ ಮಾತ್ರ ಈ ವರ್ತನೆಯನ್ನು ಕೇಳಿ ಬೇಸರವಾಯಿತಂತೆ.

ಜವಾಹರಲಾಲರಿಗೆ ತಂದೆ ಎಂದರೆ ತುಂಬಾ ಹೆದರಿಕೆ. ಒಮ್ಮೆ ಮೋತೀಲಾಲರು ಕೆಂಪಗಿನ ವೈನ್ ಎಂಬ ಸಾರಾಯಿಯನ್ನು ಕುಡಿಯುತಿದ್ದರು. ಬಾಲಕ ಜವಾಹರಲಾಲರು ಹೆದರಿ ತಾಯಿಯ ಬಳಿಗೆ ಓಡಿ "ಅಮ್ಮಾ ತಂದೆಯವರು ನೆತ್ತರು ಕುಡಿಯುತ್ತಾರೆ" ಎಂದು ಕೂಗಿದರಂತೆ. ಮೋತೀಲಾಲರು ಒಮ್ಮೆ ಮೇಜಿನ ಮೇಲೆ ಎರಡು ಪೌಂಟನುಪೆನ್ನುಗಳನ್ನಿಟ್ಟಿದ್ದರು. "ತಂದೆಗೆ ಎರಡು ಪೆನ್ನುಗಳೇಕೆ? ಒಂದು ನನಗಿರಲಿ" ಎಂದು ಯಾರಿಗೂ ತಿಳಿಯದಂತೆ ತೆಗೆದು ಅಡಗಿಸಿಟ್ಟರು ಜವಾಹರ

ಲಾಲರು. ಮೋತೀಲಾಲರು ಪೆನ್ನು ಕಾಣೆಯಾದುದನ್ನು ಕಂಡು ಹುಡುಕಲಾರಂಭಿಸಿದರು. ಕೊನೆಗೆ ಜವಾಹರಲಾಲರಲ್ಲಿದ್ದುದು ಪತ್ತೆಯಾಯಿತು. ಕೋಪದಿಂದ ಮೋತೀಲಾಲರು ಮಗನಿಗೆ ಚೆನ್ನಾಗಿ ಹೊಡೆದು ಬಿಟ್ಟರು. ಜವಾಹರಲಾಲರಿಗೆ ತುಂಬಾ ನೋವಾಯಿತು. ಆದರೆ ಮನಸ್ಸಿನಲ್ಲಿ ಇದು ತನ್ನ ತಪ್ಪಿಗೆ ತಕ್ಕ ಶಿಕ್ಷೆ ಎಂಬ ಸಮಾಧಾನವೂ ಇತ್ತು. ಒಬ್ಬನೇ ಒಬ್ಬನಾದ ಮಗನನ್ನು ರಾಜಕುಮಾರನಂತೆ ಲಾಲಿಸುತಿದ್ದರೂ ತಪ್ಪು ಮಾಡಿದರೆ ಕ್ಷಮಿಸುತ್ತಿರಲಿಲ್ಲ. ತನ್ನ ಆತ್ಮಕಥೆಯಲ್ಲಿ ಜವಾಹರಲಾಲರು "ತಂದೆಯ ಧೈರ್ಯ, ಶೌರ್ಯಗಳನ್ನು ನಾನು ಮೆಚ್ಚುತಿದ್ದೆ; ನಾನೂ ಅವರಂತೆಯೇ ಆಗಬೇಕೆಂದು ಎಣಿಸುತಿದ್ದೆ; ಆದರೂ ಅವರನ್ನು ಕಂಡಾಗ ನನಗೆ ಹೆದರಿಕೆಯೇ ಆಗುತಿತ್ತು" ಎಂದು ಬರೆದಿರುವರು.

ಮಗನ ಮೇಲೆ ಮೋತೀಲಾಲರಿಗೆ ಅತ್ಯಂತ ಪ್ರೀತಿಯಿತ್ತು. ಗಾಂಧೀಜಿಯವರು ಸತ್ಯಾಗ್ರಹವೆಂಬ ಹೊಸ ಚಳವಳಿಯನ್ನು ಆರಂಭಿಸಿದ್ದ ಸಮಯ. ಜವಾಹರಲಾಲರಿಗೂ ಸತ್ಯಾಗ್ರಹಿಯಾಗಿ ಜೈಲು ಸೇರಬೇಕೆಂಬ ಅಪೇಕ್ಷೆಯಾಯಿತು. ತನ್ನ ಮಗನು ಜೈಲು ಸೇರುವುದು ಮೋತೀಲಾಲರಿಗೂ ಕಷ್ಟವಾಗಿ ಕಂಡಿತು. ಇದ್ದ ಒಬ್ಬ ಮಗನೂ ಜೈಲು ಸೇರಿ ಕಷ್ಟಪಡುವುದೇ? ಎಂದು ದುಃಖಿಸಿದರು. ಜೈಲಿನಲ್ಲಿ ಬರಿಯ ನೆಲದಲ್ಲಿ ಮಲಗಬೇಕು. ತನ್ನ ಮಗನು ಎಂತಹ ಕಷ್ಟಗಳನ್ನೆಲ್ಲಾ ಅನುಭವಿಸಲಿಕ್ಕಿದೆ ಎಂಬುದನ್ನು ಕಾರ್ಯತಃ ಕಂಡು ಹಿಡಿಯಲು ಯಾರಿಗೂ ತಿಳಿಯದಂತೆ ಬರಿಯ ನೆಲದಲ್ಲಿ ಮಲಗಿ ನೋಡಿದರು. ಕೊನೆಗೆ ಗಾಂಧೀಜೀಯವರಿಂದಲೇ ಮಗನಿಗೆ "ಅವಸರ ಮಾಡಬಾರದು" ಎಂದು ಬುದ್ಧಿ ಹೇಳಿಸಿದರು.

ಮೋತೀಲಾಲರ ಸ್ವರಾಜ್ಯ ಸೇವೆ, ದೇಶಭಕ್ತಿ, ತ್ಯಾಗಗಳೇನೂ ಕಡಿಮೆಯಾದವುಗಳಲ್ಲ. ಕಾಂಗ್ರೆಸ್ ಸಭೆಯ ಅಧ್ಯಕ್ಷರಾಗಿದ್ದರು. ಕಾಂಗ್ರೆಸ್ ಸ್ವಯಂ ಸೇವಕ ಸೇವಕಿಯರ ಹೆಸರಿನ ಪಟ್ಟಿಯಲ್ಲಿ ಅವರ ಹೆಸರು ಒಂದನೆಯದಾಗಿತ್ತು. ಜೈಲೆಂದರೆ ಹೆದರುತಿದ್ದ ಮೋತೀಲಾಲರು ಸ್ವರಾಜ್ಯ ಚಳವಳಿಯಿಂದ ಜೈಲನ್ನೂ ಸೇರಿದರು. ತನ್ನ ಆನಂದ ಭವನವೆಂಬ ದೊಡ್ಡ ಬಂಗಲೆಯನ್ನು ಕಾಂಗ್ರೆಸ್ ಸಂಸ್ಥೆಗೆ ಬಿಟ್ಟುಕೊಟ್ಟರು.

ಆದಕ್ಕೀಗ ಸ್ವರಾಜ್ಯಭವನವೆಂದು ಹೆಸರು. ಮಗನನ್ನು ದೇಶಸೇವೆಗಾಗಿ ಹುರಿದುಂಬಿಸುತಿದ್ದರು. ಬರಬರುತ್ತಾ ಅವರ ದೇಹಸ್ಥಿತಿಯು ಕೆಡುತ್ತಾ ಬಂತು. ರೋಗಿಯಾಗಿ ಹಾಸಿಗೆಯಲ್ಲಿ ನರಳುತ್ತಾ ಇನ್ನು ತಾನು ಹೆಚ್ಚು ಕಾಲ ಬದುಕಲಿಕ್ಕಿಲ್ಲವೆಂದು ತಿಳಿದೊಡನೆ ಗಾಂಧೀಜಿಯವರೊಡನೆ "ನನ್ನ ಕಾಲವು ಆಗುತ್ತಾ ಬಂತು, ಸ್ವಾತಂತ್ರ್ಯ ಉತ್ಸವವನ್ನು ಕಾಣಲು ನಾನಿರುವುದಿಲ್ಲ. ಆದರೆ ನೀವದನ್ನು ಪಡೆಯದೆ ಬಿಡುವುದಿಲ್ಲ" ಎಂದಿದ್ದರು. 1936ನೇ ಫೆಬ್ರವರಿ 6ರಂದು ಬೆಳಿಗ್ಗೆ ಶಾಂತತೆಯಿಂದ ಇಹಲೋಕದ ಯಾತ್ರೆಯನ್ನು ಮುಗಿಸಿದರು. ಗಾಂಧೀಜಿಯವರು ಸ್ವರೂಪರಾಣಿಯನ್ನು ಸಮಜಾಯಿಸುತ್ತಾ "ಮೋತೀಲಾಲ್ ಸತ್ತಿಲ್ಲ ತಾಯೀ, ಆತನು ಚಿರಂಜೀವಿ" ಎಂದಿದ್ದರು.

## ೩. ತಾಯಿ—ಸ್ವರೂಪರಾಣಿದೇವಿ.

ಮೋತೀಲಾಲರ ಪತ್ನಿಯು ಸ್ವರೂಪರಾಣಿದೇವಿ. ರೂಪು, ವೈಭವಗಳಲ್ಲಿ ಗಂಡನಿಗೆ ಸರಿಯಾದ ಹೆಂಡತಿ. 1885ನೇ ಇಸವಿಯಲ್ಲಿ ಇವರ ವಿವಾಹವಾಯಿತು. ಜವಾಹರಲಾಲರಿಗೆ ಆಕೆಯು ಆಗಾಗ ಕತೆಗಳನ್ನು ಹೇಳುತ್ತಿದ್ದರು. ತಾಯಿಯೆಂದರೆ ಜವಾಹರಲಾಲರಿಗೆ ಬಹಳ ಸಲುಗೆ. ಮಗನನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರು. "ನನ್ನಾ" ಎಂದು ಪ್ರೀತಿಯಿಂದ ಕರೆಯುತ್ತಿದ್ದರು. ದೇಶಸೇವೆಯಲ್ಲಿ ಆಕೆಯೇನೂ ಹಿಂದಿರಲಿಲ್ಲ. ಪರದೇಶೀಯ ವಸ್ತ್ರಗಳನ್ನು ಬಹಿಷ್ಕರಿಸುವ ಚಳುವಳಿ ನಡೆದಾಗ ಸ್ವತಹ ಸ್ವರೂಪರಾಣಿ ದೇವಿಯೇ ಅಂಗಡಿಗಳ ಎದುರು ಬಿಸಿಲಿಗೆ ನಿಂತು 'ಪಿಕೆಟಿಂಗ್' ಮಾಡಿದ್ದರು. ಪಿಕೆಟಿಂಗ್ ಎಂದರೆ ಅಂಗಡಿಯ ಬಾಗಿಲಿನ ಬಳಿ ನಿಂತು ಯಾರೂ ವಸ್ತ್ರಗಳನ್ನು ಕೊಂಡುಕೊಳ್ಳಬೇಡಿರಿ ಎಂದು ಹೇಳುವುದು. ರಾಷ್ಟ್ರೀಯ ವಾರದ ಆಚರಣೆಗಾಗಿ ಮೆರವಣಿಗೆ ಹೊರಟಿತ್ತು. ಸ್ವರೂಪರಾಣಿ ದೇವಿಯವರು ಎಲ್ಲರಿಗಿಂತಲೂ ಮುಂದಾಗಿಯೇ ಹೋಗುತ್ತಿದ್ದರು. ಅಷ್ಟರಲ್ಲಿ ಪೋಲೀಸರು ಓಡಿಸಿಕೊಂಡು ಬಂದರು. ಮುಂದೆ ಬರುವ ಅಪಾಯವನ್ನು ಕಂಡು ಯಾರೋ ಒಬ್ಬರು ಒಂದು ಕುರ್ಚಿಯನ್ನು ತಂದು ನಡು ರಸ್ತೆಯಲ್ಲಿ ನಿಂತಿದ್ದ

ಸ್ವರೂಪರಾಣಿಯು ಬಳಿಯಿಟ್ಟರು. ಲಾಠಿ ಹೊಡೆತ ಬಡೆತಗಳಿಗಾರಂಭವಾಯಿತು. ಸ್ವರೂಪರಾಣಿಯು ಓಡಲಿಲ್ಲ. ಅತ್ತಿತ್ತ ಕದಲಲಿಲ್ಲ. ರಸ್ತೆಯ ಮಧ್ಯದಲ್ಲಿ ಆ ಕುರ್ಚಿಯಲ್ಲೇ ಕುಳಿತು ಬಿಟ್ಟರು. ಪೋಲೀಸರು ಆ ಮಹಾಮಾತೆಯನ್ನು ಕುಳಿತಲ್ಲಿಂದ ಕೆಳಕ್ಕೆ ತಳ್ಳಿದರು. ಲಾಠಿಯಿಂದ ಬಡೆದರು. ಲಾಠಿಯ ಹೊಡೆತದಿಂದ ತಲೆಯೊಡೆಯಿತು. ನೆತ್ತರು ಧಾರೆ ಧಾರೆಯಾಗಿ ಸುರಿಯಿತು. ಸ್ಮೃತಿ ತಪ್ಪಿತು. ಮಧ್ಯ ಮಾರ್ಗದಲ್ಲೇ ನಿಶ್ಚೇತನರಾಗಿ ಬಿದ್ದು ಬಿಟ್ಟರು. "ನನ್ನ ತಾಯಿಗಾದ ಈ ಅವಸ್ಥೆಯನ್ನು ಕಂಡು ನಾನಲ್ಲಿದ್ದರೆ ಏನು ಮಾಡುತ್ತಿದ್ದೆನೋ? ನನ್ನ ಅಹಿಂಸಾತತ್ವವು ಏನಾಗುತ್ತಿತ್ತೊ" ಎಂದು ಜವಾಹರಲಾಲರೇ ಉದ್ರೇಕದಿಂದ ಹೇಳಿರುವರು.

ಸ್ವರೂಪರಾಣಿಯವರಿಗೆ ಬೀಬಿ ಅಮ್ಮನೆಂಬ ಹಿರಿಯ ಸಹೋದರಿಯರೊಬ್ಬರಿದ್ದರು. ಆಕೆಯು ಬಾಲ್ಯದಲ್ಲೇ ವಿಧವೆಯಾಗಿದ್ದರು. ಬೀಬಿ ಅಮ್ಮನು ಜವಾಹರಲಾಲರಿಗೆ ಆಗಾಗ ವೀರ ಪುರುಷರ ಕತೆಗಳನ್ನು ಹೇಳುತಿದ್ದರು. ಲಾಠಿ ಪೆಟ್ಟಿಗೆ ಗುರಿಯಾದನಂತರ ಸ್ವರೂಪರಾಣಿಯ ಆರೋಗ್ಯವು ಕೆಡುತ್ತಾಬಂದು ಕೆಲವೇ ಸಮಯದ ನಂತರ ಆಕೆಯು ತೀರಿ ಹೋದರು. ಸ್ವರೂಪರಾಣಿದೇವಿ ತೀರಿ ಹೋದ 24ತಾಸುಗಳೊಳಗೆ ಬೀಬಿ ಅಮ್ಮನೂ ತೀರಿ ಹೋದರು. "ತಂಗಿಗಾಗಿ ಇದು ವರೆಗೆ ಬದುಕಿದ್ದೆ" ಎನ್ನುತ್ತಾ ಪ್ರಾಣಬಿಟ್ಟರು. ಇಂತ ಅಕ್ಕ ತಂಗಿಯರು ಅಪರೂಪವಲ್ಲವೆ?

## ೪. ಪತ್ನಿ—ಕಮಲಾದೇವಿ.

ಜವಾಹರಲಾಲರ ಪತ್ನಿಯ ಹೆಸರು ಕಮಲಾದೇವಿ. ಆಕೆಯ ತಂದೆಯ ಹೆಸರು ಜವಾಹರಲಾಲ ಕೌಲ್ಎಂದು. 1916ನೇ ಇಸವಿಯಲ್ಲಿ ಡಿಲ್ಲಿಯಲ್ಲಿ ಇವರ ಮದುವೆಯಾಯಿತು. ಮದುವೆ ಆಗುವಾಗ ಜವಾಹರರಿಗೆ 26 ವರುಷ; ಕಮಲೆಗೆ 17. ಮದುವೆಯಾಗಿ ಇಪ್ಪತ್ತೊಂದು ತಿಂಗಳುಗಳ ತರುವಾಯ ಇಂದಿರೆಯು ಹುಟ್ಟಿದಳು. ಅನಂತರ ಹುಟ್ಟಿದ ಒಂದೇ ಒಂದು ಗಂಡು ಮಗುವೂ ತೀರಿ ಹೋಯಿತು.

ಸ್ವರಾಜ್ಯ ಚಳವಳಿಯಲ್ಲಿ ಆಕೆಯೂ ಮುಂದಾಗಿದ್ದರು. 1931ರಲ್ಲಿ ಅಲಹಾಬಾದಿನಲ್ಲಿ ಆಕೆಯ ದಸ್ತಗಿರಿಯಾಯಿತು. ಜವಾಹರಲಾಲರು ಆಗ ಜೈಲಿನಲ್ಲಿಯೇ ಇದ್ದರು. ಪೋಲೀಸರು ಆಕೆಯನ್ನು ಕೈದುಮಾಡಿ ಜೈಲಿಗೆ ಕರೆದೊಯ್ಯುವಾಗ ಆಕೆಗೇನೂ ವ್ಯಥೆಯಾಗಲಿಲ್ಲ. "ನನ್ನ ಪತಿಯನ್ನು ಹಿಂಬಾಲಿಸಲು ನನಗೆ ಆನಂದವಾಗುತ್ತಿದೆ" ಎಂದರಂತೆ.

ಜವಾಹರಲಾಲರ ಜೀವನದಲ್ಲಿ ಜೈಲುವಾಸವೇ ಹೆಚ್ಚಿನ ಅಂಶ. ಅವರು 7ನೇ ಬಾರಿ ಜೈನಲ್ಲಿರುವಾಗ ಕಮಲಾದೇವಿಯು ಅಸೌಖ್ಯವಾಗಿದ್ದರು. ದಿನದಿಂದ ದಿನಕ್ಕೆ ಪರಿಸ್ಥಿತಿಯು ಚಿಂತಾಜನಕವಾಗಿತ್ತು. ಬದುಕುವ ಆಶೆ ಕಡಿಮೆಯಾಯಿತು. ಸರಕಾರವು ಕೆಲವು ದಿವಸಗಳ ಮಟ್ಟಿಗೆ ಜವಾಹರಲಾಲರನ್ನು ಬಿಡುಗಡೆ ಮಾಡಿತು. ಕಮಲಾದೇವಿಯು ಬದುಕುವ ಭರವಸೆಯಿಲ್ಲವಾದ್ದರಿಂದ ವೈದ್ಯರು ಸರಕಾರಕ್ಕೆ ಜವಾಹರಲಾಲರನ್ನು ಬಿಡುಗಡೆ ಮಾಡಬೇಕೆಂದು ಸಲಹೆಕೊಟ್ಟದ್ದರು. ನೆಹರುಗಳು ಬಹು ಆತುರದಿಂದ ತನ್ನ ಪ್ರೀತಿಯ ಮಡದಿಯನ್ನು ಕಾಣಲು ಧಾವಿಸಿದರು-

ಜವಾಹರಲಾಲರನ್ನು ಕಮಲೆಯ ಬಳಿ ಇರಲು ಬಿಟ್ಟದ್ದರಿಂದ ಆಕೆಯ ಆರೋಗ್ಯವು ದಿನಧಿಂದ ದಿನಕ್ಕೆ ವೃದ್ಧಿಯಾಗುತ್ತಾ ಬಂತು. ಆದರೆ ಬಿಡುಗಡೆಯಾಗಿ ಹನ್ನೊಂದು ದಿನಗಳ ನಂತರ ಪುನಹ ಜೈಲು ಸೇರಬೇಕೆಂದು ಸರಕಾರವು ವಿಧಿಸಿತು. ಕಮಲಾದೇವಿಯು ಎವೆಯಿಕ್ಕದೆ ನೋಡುತ್ತಿದ್ದಂತೆ ಜವಾಹರಲಾಲರು ಆಕೆಯನ್ನು ಬಿಟ್ಟು ಜೈಲಿಗೆ ತೆರಳಿದರು.

ಅಂದಿಸಿಂದ ತಿರುಗಿ ಕಮಲಾದೇವಿಯ ಆರೋಗ್ಯವು ಕೆಡುತ್ತಾ ಬಂತು. ಪರಿಸ್ಥಿತಿಯು ಬಹು ವಿಷಮಸ್ಥಿತಿಗೆ ಮುಟ್ಟಿದಾಗ ಒಂದು ದಿನದ ಮಟ್ಟಿಗೆ ಜವಾಹರಲಾಲರನ್ನು ಬಿಡುಗಡೆ ಮಾಡಿದರು. ಇನ್ನು ಕಮಲಾದೇವಿಯು ಉಳಿಯುವ ಆಶೆಯೇ ಉಳಿಯಲಿಲ್ಲ. ರಾಜಕೀಯ ಚಟುವಟಿಕೆಯಲ್ಲಿ ತಾನು ಭಾಗವಹಿಸುವುದಿಲ್ಲವೆಂಬ ಒಂದು ಭರವಸೆಯನ್ನು ಕೊಟ್ಟರೆ ಅವರನ್ನು ಜೈಲಿನಿಂದ ಬಿಡುಗಡೆ ಮಾಡಬಹುದೆಂದು ಸರಕಾರವು ತಿಳಿಸಿತು. ತಾನು ಆಕೆಯ ಬಳಿಯಿದ್ದರೆ ಕಮಲೆಯ ಸ್ಥಿತಿಯು

ಸುಧಾರಿಸೀತು ಎಂಬ ಸ್ಥೈರ್ಯವು ಜವಾಹರಲಾಲರಿಗಿತ್ತು. ಆದರೆ ಅಂತಹ ಯಾವುದೇ ತರದ ಭರವಸೆಯನ್ನು ಸರಕಾರಕ್ಕೆ ಕೊಡಲು ಅವರು ಒಪ್ಪಲಿಲ್ಲ. ತನ್ನ ಹೆಂಡತಿ ಮಾತ್ರವೇಕೆ? ತನ್ನ ಪ್ರಾಣಕ್ಕಿಂತಲೂ ಅವರಿಗೆ ದೇಶಸೇವೆ ಹೆಚ್ಚಿನದಾಗಿತ್ತು. ಆದರೆ ಕಮಲೆಯು ಏನು ತಿಳಿದುಕೊಳ್ಳುವಳೋ ಎಂಬ ಅನುಮಾನವು ಮನಸ್ಸಿನಲ್ಲಿ ಕೊರೆಯುತಿತ್ತು. ಒಂದು ದಿನ ಆಕೆಯ ಬೇಟಿ ಮಾಡಿ ಜವಾಹರಲಾಲರು ಪೋಲೀಸರೊಡನೆ ಜೈಲಿಗೆ ಹಿಂದಿರುಗುವುದರಲ್ಲಿದ್ದರು. ಈಗಲೋ ಇನ್ನೊಂದು ಗಳಿಗೆಯಲ್ಲೋ ಪ್ರಾಣಬಿಡುವಂತಿದ್ದ ಕಮಲಾದೇವಿಯು ಸರಿಯಾಗಿ ಮಾತನಾಡಲಾಗದೆ ತಡವರಿಸುತ್ತಾ ಮೆಲ್ಲನೆ "ಸರಕಾರಕ್ಕೆ ಯಾವ ಭರವಸೆಯನ್ನೂ ನನಗಾಗಿ ಕೊಡಬೇಡಿರಿ" ಎಂದರಂತೆ.

ಉತ್ತಮವಾದ ಹವೆಯು ಕಮಲಾದೇವಿಯ ಆರೋಗ್ಯವನ್ನು ವೃದ್ಧಿಗೊಳಿಸೀತು ಎಂದು ಡಾಕ್ಟರರು ಸೂಚಿಸಿದ್ದರು. ಅದಕ್ಕಾಗಿ ಆಕೆಯನ್ನು ಜರ್ಮನಿಯ ಬಾಡೆನ್‌ವೈಲ್ ಎಂಬಲ್ಲಿಗೆ ಕರೆದುಕೊಂಡು ಹೋದರು. ಆದರೆ ಅದರಿಂದಲೂ ಆಕೆಗೆ ಗುಣವಾಗಲಿಲ್ಲ. 1935ನೇ ಜನವರಿ 28ರಲ್ಲಿ ಕಮಲಾದೇವಿಯವರು ತೀರಿ ಹೋದರು.

## ೫. ಸಹೋದರಿಯರು ಮತ್ತು ಮಗಳು.

ವಿಜಯಲಕ್ಷ್ಮಿ ಮತ್ತು ಕೃಷ್ಣೆ ಎಂಬ ಇಬ್ಬರು ಜವಾಹರಲಾಲರ ಸಹೋದರಿಯರು. ವಿಜಯಲಕ್ಷ್ಮಿಯು ಅಮೇರಿಕಾ ದೇಶದಲ್ಲಿ ಹಿಂದೂ ದೇಶದ ರಾಯಭಾರಿಯಾಗಿದ್ದರು. ಮೊನ್ನೆಯ ಮಹಾ ಚುನಾವಣೆಯಲ್ಲಿ ಕೇಂದ್ರ ಸಭೆಗೆ ಚುನಾಯಿತರಾಗಿರುವರು. ತನ್ನ ಸಹೋದರನಂತೆ ತಾನೂ ದೇಶಕ್ಕಾಗಿ ದುಡಿಯುತ್ತಿರುವರು. ಇಂದಿರೆಯ ಪತಿಯ ಹೆಸರು ಪಿರೋಜ್ ಗಾಂಧಿ. ಗಾಂಧಿ ಎಂಬುದು ಅವರ ಮನೆತನದ ಹೆಸರು. ಗುಜರಾಥ ದೇಶದ ಇವರು ಜಾತಿಯಲ್ಲಿ ಫಾರಸಿಯರು. ಜಾತಿಯು ಬೇರೆಯಾದುದರಿಂದ ಇವರ ಮದುವೆಗೆ ಆಕ್ಷೇಪಗಳಿದ್ದುವು. ಜಾತಿಬೇಧದ ನೆರಳು ಸಹಾ ಜವಾಹರಲಾಲರಿಗೆ ಕಂಡರಾಗದು. ಜೊತೆಗೆ ಮಹಾತ್ಮಾ ಗಾಂಧೀಯವರೂ ಮದುವೆಗೆ ತನ್ನ ಒಪ್ಪಿಗೆಯನ್ನಿತ್ತು ಹರಸಿದರು.

ಇಂದಿರಾ ಪ್ರಿಯದರ್ಶನಿ ಜವಾಹರಲಾಲರ ಒಬ್ಬಳೇ ಮಗಳು. ಶಾಂತಿನಿಕೇತನದಲ್ಲಿಯೂ ಯುರೋಪಿನಲ್ಲಿಯೂ ಇವರು ವಿದ್ಯಾಭ್ಯಾಸ ಪಡೆದರು. ನೆಹರುಗಳ ಸಂಚಾರಕಾಲದಲ್ಲಿ ಇವರು ತನ್ನ ತಂದೆ ಯೊಡನೆ ಇರಲು ಇಷ್ಟಪಡುವರು.

## ೬. ಬಾಲ್ಯ ಮತ್ತು ವಿದ್ಯಾಭ್ಯಾಸ

ಮೋತೀಲಾಲರು ಜವಾಹರಲಾಲರನ್ನು ಬಾಲ್ಯದಲ್ಲಿ ರಾಜಕುಮಾರ ನಂತೆ ಸಾಕಿದ್ದರು. ಇವರನ್ನು ಸಾಕಲು ಇಂಗ್ಲೀಷ್ ಹೆಂಗಸರನ್ನೇ ಪರಿ ಚಾರಿಕೆಯರನ್ನಾಗಿ ನೇಮಿಸಿದ್ದರು. ಜವಾಹರಲಾಲರನ್ನು ಊರಿನ ಯಾವ ಶಾಲೆಗೂ ಕಳುಹಿಸಲಿಲ್ಲ. ಮನೆಯಲ್ಲಿಯೇ ಪಾಠಹೇಳಿಸುತಿದ್ದರು. ಓದು ಬರಹಗಳ ಒಟ್ಟಿಗೆ ಕುದುರೆ ಸವಾರಿ, ಈಜಾಟ ಮುಂತಾದ ಅಭ್ಯಾಸಗಳೂ ಇದ್ದುವು. ಯಫ್. ಟಿ. ಬ್ರೂಕ್ಸ್ ಎಂಬ ಯುರೋಪಿಯ ನನು ಜವಾಹರಲಾಲರ ಪ್ರೀತಿಯ ಗುರುವು. ಆತನೇ ಜವಾಹರಲಾಲ ರಿಗೆ ಉತ್ತಮ ದಾರಿಯನ್ನು ತೋರಿಸಿದನೆನ್ನಬಹುದು.

ಹದಿನೈದು ವರುಷದ ಜವಾಹರಲಾಲರನ್ನು ಇಂಗ್ಲೇಂಡಿಗೆ ಶಾಲೆಗೆ ಸೇರಿಸಲು ಮೋತೀಲಾಲರು ಕರೆದುಕೊಂಡು ಹೋದರು. ಲೋರ್ಡ್ ಡೌಲ್ ಹೌಸಿ, ವೆಲ್ಲೆಸ್ಲಿ, ಚರ್ಚಿಲ್ ಮೊದಲಾದ ದೊಡ್ಡ ಜನರು ಕಲಿತ 'ಹ್ಯಾರೋ' ಎಂಬ ಶಾಲೆಗೆ ಜವಾಹರಲಾಲರನ್ನು ಸೇರಿಸಿದರು. ಅಲ್ಲಿ ಕಲಿತ ನಂತರ 'ಕೇಂಬ್ರಿಜ್' ವಿಶ್ವವಿದ್ಯಾಲಯದಲ್ಲಿ ವನಸ್ಪತಿ ಶಾಸ್ತ್ರ, ಭೂಗರ್ಭಶಾಸ್ತ್ರ ಮತ್ತು ರಸಾಯನ ಶಾಸ್ತ್ರಗಳನ್ನು ಆಳವಾಗಿ ಅಭ್ಯಾಸಿಸಿ ದರು. ಎಂ. ಎ. ಪದವಿ ಪಡೆದ ನಂತರ ವಕೀಲ ಪರೀಕ್ಷೆಯನ್ನು ಮುಗಿಸಿದರು.

## ೭. ಜೈಲುವಾಸ.

ಮುಂದೆ ಜವಾಹರಲಾಲರ ಜೀವನದಲ್ಲಿ ದೇಶಸೇವೆಯ ಕೆಲಸ ಗಳೇ ಹೆಚ್ಚು. ಅಖಿಲ ಭಾರತ ಕಾಂಗ್ರೆಸಿನ ಕಾರ್ಯದರ್ಶಿಗಳಾಗಿ ಅನೇಕ

ವರ್ಷ ದುಡಿದರು. ಲಾಹೋರು ಎಂಬಲ್ಲಿ ಜರಗಿದ ಕಾಂಗ್ರೆಸ್ ಮಹಾಸಭೆಯ ಅಧ್ಯಕ್ಷರೂ ಆಗಿದ್ದರು. ಅಲಹಾಬಾದ್ ನಗರಸಭೆಯ ಅಧ್ಯಕ್ಷರೂ ಆಗಿದ್ದರು.

ಗಾಂಧೀಜಿಯವರ ಮುಂದಾಳುತನದಲ್ಲಿ ಅಸಹಕಾರ ಚಳವಳಿಯು ಆರಂಭವಾಗಿತ್ತು. ನಮ್ಮ ದೇಶವನ್ನು ಪರದೇಶೀಯರಾದ ಇಂಗ್ಲೀಷರು ಆಳಬಾರದು; ನಾವೇ ನಮ್ಮನ್ನು ಆಳಬೇಕು ಎಂಬುದೇ ಎಲ್ಲಾ ಚಳವಳಿಗೂ ಕಾರಣ. ಇದಕ್ಕಾಗಿ ಕಾಂಗ್ರೆಸ್ ಎಂಬ ಸಭೆ ಸೇರಿ ನಮ್ಮ ದೇಶದ ದೊಡ್ಡವರೆಲ್ಲರೂ ಪ್ರಯತ್ನಿಸುತ್ತಿದ್ದರು. ಸರಕಾರಕ್ಕೆ ಇದು ಮೆಚ್ಚಿಕೆಯಾದೀತೆ? ಚಳವಳ ಮಾಡುವವರನ್ನು ಸರಕಾರವು ಬಂಧಿಸಿ ಜೈಲಿಗೆ ಕಳುಹಿಸಿತು. ಸುಮಾರು ಎರಡು ತಿಂಗಳುಗಳಲ್ಲೇ ಮೂವತ್ತು ಸಾವಿರಕ್ಕೂ ಹೆಚ್ಚಿನ ಜನರು ಜೈಲು ಸೇರಿದರು. ಇದೇ ಸಮಯದಲ್ಲಿ ಅಂದರೆ 1921ನೇ ಇಸವಿಯಲ್ಲಿ ಜವಾಹರಲಾಲ ನೆಹರುಗಳನ್ನೂ ಬಂಧಿಸಿದರು. ಆಗ ಅವರು ಅಲಹಾಬಾದ್ ಕಾಂಗ್ರೆಸ್ ಕಚೇರಿಯಲ್ಲಿ ಕೆಲಸಮಾಡುತ್ತಾ ಇದ್ದರು. ಪೋಲೀಸರು ಬಂದು ಆಫೀಸನ್ನು ಝಡ್ತಿ ಮಾಡುತ್ತಿದ್ದಾರೆಂದು ಗುಮಾಸ್ತನೊಬ್ಬನು ಬಂದು ತಿಳಿಸಿದನು. ಜವಾಹರಲಾಲರು ಸ್ವಲ್ಪ ಉದ್ರೇಕಗೊಂಡರೂ ಅದನ್ನು ಹೊರಗೆ ತೋರ್ಪಡಿಸಲಿಲ್ಲ. ತನ್ನ ಕೆಲಸದಲ್ಲಿಯೇ ಇದ್ದರು. ಪೋಲೀಸ್ ಅಧಿಕಾರಿಯು ಕಾಂಗ್ರೆಸ್ ಆಫೀಸಿನ ತಪಾಸಣೆ ಮುಗಿದೊಡನೆ ಜವಾಹರಲಾಲರಿದ್ದಲ್ಲಿಗೆ ಬಂದನು. ಅವರನ್ನು ಕೈದು ಮಾಡಲು ಕೊಟ್ಟಿದ್ದ ಪತ್ರವನ್ನು ತೋರಿಸಿದನು. ನೆಹರುಗಳ ಬಂಧನವಾಯಿತು. ಅವರನ್ನು ಲಖ್ನೋ ಜೈಲಿಗೆ ಕೊಂಡು ಹೋದರು.

ಜವಾಹರಲಾಲರೂ ಮೋತೀಲಾಲರೂ ಲಕ್ನೋ ಜೈಲಿನಲ್ಲಿ ಜತೆಯಾಗಿಯೇ ಇದ್ದರು. ಜವಾಹರಲಾಲರು ಪ್ರಾತಃಕಾಲವನ್ನು ಅವರ ಜೈಲು ಕೋಣೆಗಳನ್ನು ತೊಳೆಯುವುದರಲ್ಲಿಯೂ ತಂದೆಯ ಮತ್ತು ತನ್ನ ವಸ್ತ್ರಗಳನ್ನು ಒಗೆಯುವುದರಲ್ಲಿಯೂ ಕಳೆಯುತಿದ್ದರು. ಮೂರು ತಿಂಗಳ ನಂತರ ಜವಾಹರಲಾಲರ ಬಿಡುಗಡೆಯಾಯಿತು. 6 ವಾರಗಳ ತರುವಾಯ ಪುನಹ ಬಂಧನವಾಗಿ ಮತ್ತೆ ಅದೇ ಜೈಲನ್ನು ಸೇರಿದರು. ಆದರೆ ಈ ಬಾರಿ

ಜೈಲಿನ ಕ್ರಮಗಳು ಬಹು ಬಿಗುವಾಗಿದ್ದುವು. ಮೋತೀಲಾಲರನ್ನು ನೈನಿ ಜೈಲಿಗೆ ವರ್ಗಾಯಿಸಿದ್ದರು. ಜವಾಹರಲಾಲರಂತೆ ಇನ್ನೂ ಬಹು ಮಂದಿ ರಾಜಕೀಯ ಕೈದಿಗಳು ನೈನಿ ಜೈಲಿನಲ್ಲಿದ್ದರು. ಅವರಲ್ಲಿ ಜೋರ್ಜ್ ಜೋಸೆಫ್ ಎಂಬವರು ಒಬ್ಬರು. ಜವಾಹರಲಾಲರು ಅವರೊಡನೆ ಸಂಭಾಷಿಸಲು ಮೆಚ್ಚುತಿದ್ದರು. ಜೈಲಿನ ಕ್ರಮಗಳು ಬಹು ಬಿಗುವಾಗಿದ್ದುದರಿಂದ ಜವಾಹರಲಾಲರನ್ನು ಜೈಲಿನ ವಠಾರದೊಳಗೆ ಕೂಡಾ ತಿರುಗಾಡಲು ಬಿಡುತ್ತಿರಲಿಲ್ಲ. ಆದುದರಿಂದ ದೈಹಿಕ ಅಭ್ಯಾಸ ಮತ್ತು ವ್ಯಾಯಾಮಗಳಿಗೋಸ್ಕರ ಕೋಣೆಯೊಳಗೆಯೇ ವೃತ್ತಾಕಾರವಾಗಿ ಜವಾಹರಲಾಲರು ಓಡುತಿದ್ದರು. ಎತ್ತುಗಳಂತೆ ಇಬ್ಬರು ಜತೆಯಾಗಿ ನೊಗಕ್ಕೆ ಹೆಗಲೊಡ್ಡಿ ನೀರು ಎಳೆಯುವುದು ಕೈದಿಗಳ ಕೆಲಸವಾಗಿತ್ತು. ಜವಾಹರಲಾಲರೂ ಎಲ್ಲರಂತೆ ನೀರೆಳೆಯಬೇಕಿತ್ತು. ದಿನನಿತ್ಯದ ಕೆಲಸಗಳಲ್ಲಿ ಓದಲಿಕ್ಕನೇ ಹೆಚ್ಚು ಸಮಯವನ್ನು ಉಪಯೋಗಿಸುತಿದ್ದರು. ಇವರು ಯಾವಾಗಲೂ ಓದುತ್ತಿರುವುದು ಜೈಲಿನ ಸುಪರಿಂಟೆಂಡೆಂಟರಿಗೆ ಮೆಚ್ಚಿಕೆಯಾಗಲಿಲ್ಲ. “ಎಷ್ಟು ಓದುತ್ತಿಯಪ್ಪಾ, ನಾನು ನನ್ನ ಹನ್ನೆರಡು ವರುಷಗಳೊಳಗೆ ಎಲ್ಲಾ ಓದನ್ನು ಮುಗಿಸಿರುವೆನು” ಎಂದರಂತೆ. ನೈನಿ ಜೈಲಿನ ಆಹಾರವೂ ಚೆನ್ನಾಗಿರಲಿಲ್ಲ. ಅಧಿಕಾರಿಗಳಿಗೆ ಸಂಬಳವು ಕಡಿಮೆಯಾದುದರಿಂದ ಅವರು ಕೈದಿಗಳಿಂದ ಮತ್ತು ಕೈದಿಗಳ ಸಂಬಂಧಿಕರಿಂದ ಇನಾಮು ಪಡೆಯಲು ಆತುರರಾಗಿದ್ದರು. ಅಂತೂ 21 ತಿಂಗಳುಗಳ ನಂತರ ಲಕ್ನೋ ಜೈಲಿನಿಂದ ಅವರ ಬಿಡುಗಡೆಯಾಯಿತು.

ಲಕ್ನೋ ಜೈಲಿನಿಂದ ಬಿಡುಗಡೆಯಾಗಿ ಸುಮಾರು 7 ವರುಷಗಳ ನಂತರ ಉಪ್ಪಿನ ಸತ್ಯಾಗ್ರಹ ಆರಂಭವಾಯಿತು. ನೆಹರುಗಳು ಆಗ ಕಾಂಗ್ರೆಸ್ ಮಹಾಸಭೆಯ ಅಧ್ಯಕ್ಷರಾಗಿದ್ದರು. ಉಪ್ಪಿನ ಕಾನೂನಿನ ಪ್ರಕಾರ ನೆಹರುಗಳನ್ನು ಬಂಧಿಸಿ ಆರು ತಿಂಗಳ ಶಿಕ್ಷೆಯನ್ನು ವಿಧಿಸಿದರು. ಈ ಸರ್ತಿಯೂ ಅವರನ್ನು ಜೈಲಿಗೊಯ್ದರು. ಸೆಕೆಯು ವಿಪರೀತವಾಗಿದ್ದುದರಿಂದ ಕೋಣೆಯ ಹೊರಗಡೆ ಗಾಳಿಗೆ ಮಲಗಲು ಅವಕಾಶವಿತ್ತು. ಆದರೆ ಅವರ ಮಂಚವನ್ನು ಬಹು ಗಟ್ಟಿಯಾಗಿ ಕದಲಿಸದಂತೆ ಕಟ್ಟಿಹಾಕಿದ್ದರು. “ಮಂಚವನ್ನು ನಾನು ಹಿಡಿದುಕೊಂಡು ಓಡಿ

ಹೋಗುತ್ತೇನೆ ಅಥವಾ ಅದನ್ನು ಏಣಿಯನ್ನಾಗಿ ಉಪಯೋಗಿಸಿ ಗೋಡೆಹತ್ತಿ ಪಲಾಯನ ಮಾಡುತ್ತೇನೆ ಎಂದು ಹೆದರಿ ಸರಕಾರವು ಹಾಗೆ ಮಾಡಿರಬೇಕು" ಎಂದು ಜವಾಹರಲಾಲರು ಬರೆದಿರುವರು. ರಾತ್ರಿ ಕಾಲದಲ್ಲಿ ಜೈಲುವಾಸವು ಬಹು ಭಯಂಕರವಾದ ದೊಡ್ಡ ಅರಣ್ಯವಾಸದಂತೆ ಕಂಡು ಬರುತ್ತಿತ್ತು. ಜೈಲಿನ ಅಧಿಕಾರಿಗಳು, ಕಾವಲುಗಾರರು ಒಬ್ಬರನ್ನೊಬ್ಬರು ಎಚ್ಚರಿಸುತ್ತಾ ಕೂಗುತ್ತಿರುವುದು, ತಮ್ಮ ತಮ್ಮ ಸುಪರ್ದಿಯೊಳಗಿನ ಕೈದಿಗಳನ್ನು ಎಣಿಕೆ ಮಾಡುತ್ತಿರುವುದು. ಈ ಬೊಬ್ಬೆಗಳೆಲ್ಲವೂ ಕಾಡುಮೃಗಗಳ ಘರ್ಜನೆಗಳಂತೆ ಕೇಳಿಬರುತ್ತಿದ್ದುವು. ನೈನಿ ಜೈಲಿನಲ್ಲಿ ನೆಹರುಗಳ ಕೋಣೆಗೆ 'ಕುತ್ತಾಘರ್' ಅಂದರೆ ನಾಯಿಯ ಮನೆ ಎಂದು ಹೆಸರು. ಈ ಸರ್ತಿ ನೀರನ್ನು ಸೇದುವ ಕ್ರಮವೂ ವಿಚಿತ್ರವಾಗಿತ್ತು. 16 ಮಂದಿ ಒಂದು ದೊಡ್ಡ ಪಂಜರದೊಳಗೆ ತಿರುಗುತ್ತಾ ನೀರನ್ನು ಸೇದುವ ಈ ಕೆಲಸಕ್ಕೆ ನೆಹರುಗಳನ್ನು ಕೂಡಾ ಉಪಯೋಗಿಸಿದ್ದರು.

ರಾತ್ರಿ ಓದಲು ದೀಪದ ಬೆಳಕು ಸಾಕಷ್ಟು ಇರಲಿಲ್ಲ. ಆದುದರಿಂದ ಜವಾಹರಲಾಲರು ರಾತ್ರಿ ಬೇಗನೆ ಮಲಗಿ ಬೆಳಗ್ಗೆ ಮೂರು ಘಂಟೆಗೆ ಏಳುತಿದ್ದರು. ಮಲಗಿಕೊಂಡಾಗ ಧ್ರುವ ನಕ್ಷತ್ರವು ಕಾಣುತಿತ್ತು. ಆಕಾಶಮಂಡಲದಲ್ಲಿ ಸ್ಥಿರವಾಗಿರುವ ಧ್ರುವನಕ್ಷತ್ರದಂತೆ ತನ್ನ ಹೆಸರು ಪ್ರಪಂಚದಲ್ಲಿ ಸ್ಥಿರವಾಗಿ ಉಳಿಯಬೇಕು ಎಂದು ಅವರು ಭಾವಿಸಿರಬೇಕು. ಸುಮಾರು ಮೂರುವರೆ ತಿಂಗಳುಗಳ ತರುವಾಯ ಮೋತೀಲಾಲರನ್ನೂ ಸೈಯ್ಯದ್ ಮಹಮ್ಮದರನ್ನೂ ಅದೇ ಜೈಲಿಗೆ ಕರೆದು ತಂದರು. ಆರು ತಿಂಗಳುಗಳ ನಂತರ ಜಹಾಹರಲಾಲರ ಬಿಡುಗಡೆಯಾಗಿ ಮತ್ತೆ ಪೂರ್ಣ ಎಂಟು ದಿನಗಳೂ ಕಳೆಯಲಿಲ್ಲ; ಪುನಹ ರಾಜಕೀಯ ಅಪರಾಧವೆಂದು ಬಂಧಿಸಲ್ಪಟ್ಟರು. ನೈಸಿ ಜೈಲನ್ನು ಸೇರಿದರು. ಸಂಯುಕ್ತ ಪ್ರಾಂತ್ಯದಲ್ಲಿ ತೆರಿಗೆ ಕೊಡುವುದಿಲ್ಲವೆಂಬ ಚಳುವಳಿ ಆರಂಭವಾಗಿತ್ತು; ಅದಕ್ಕಾಗಿಯೇ ನೆಹರುಗಳ ಬಂಧನವಾಯಿತು.

1825ರಲ್ಲಿ ನಾಭ ಎಂಬ ಸಂಸ್ಥಾನದಲ್ಲಿ ಒಂದು ದೊಡ್ಡ ಗಲಾಟೆಯಾಯಿತು. ಅಲ್ಲಿನ ಸಿಖ್ ಜನರನ್ನು ಬ್ರಿಟಿಷ್ ಅಧಿಕಾರಿಯು ಪೀಡಿಸಿ

ದನು. ಜವಾಹರಲಾಲರಿಗೆ ಅಲ್ಲಿನ ಜನರಿಂದ ತಮ್ಮ ಸಹಾಯಕ್ಕೆ ಬರಬೇಕೆಂದು ಕರೆಬಂತು. ಜವಾಹರಲಾಲರು ಸಂತಾನಂ ಮತ್ತು ಗಿದ್ವಾನಿ ಎಂಬಿಬ್ಬರು ಗೆಳೆಯರೊಡನೆ ಅಲ್ಲಿಗೆ ಹೋದರು. ಅಲ್ಲಿನ ಅಧಿಕಾರಿಗಳು “ನಾಭ ಸಂಸ್ಥಾನದೊಳಗೆ ಕಾಲಿಡಲಾಗದು” ಎಂಬ ಅಪ್ಪಣೆಯ ಪತ್ರವನ್ನು ಜವಾಹರಲಾಲರ ಕೈಗೆ ಕೊಟ್ಟರು. ಅಲ್ಲಿಂದ ತಕ್ಷಣ ಹೊರಡಬೇಕೆಂದರು. ಆಗ ಜವಾಹರಲಾಲರು ‘‘ತಕ್ಷಣವೇ ಆಕಾಶಕ್ಕೆ ಹಾರಿ ಮಾಯವಾಗಲು ಅಸಾಧ್ಯ; ರೈಲು ಬರುವ ವರೆಗಾದರೂ ನಿಂತು ಮತ್ತೆ ಹಿಂದಿರುಗಿದರೆ ಆಗದೆ?” ಎಂದರು. ಕೂಡಲೇ ಅವರ ಬಂಧನವಾಯಿತು. ಸಾಯಂಕಾಲ ಜವಾಹರಲಾಲರ ಬಲಕೈಯನ್ನೂ ಸಂತಾನಂರವರ ಎಡಕೈಯನ್ನೂ ಸೇರಿಸಿ ಬೇಡಿ ಹಾಕಿ ಸರಪಳಿಯನ್ನು ಹಿಂದಿನಿಂದ ಪೋಲೀಸರು ಹಿಡಿದುಕೊಂಡು ಬೀದಿಯಲ್ಲಿ ಮೆರವಣಿಗೆಯಂತೆ ಕರೆದುಕೊಂಡು ಹೋದರು. ಮರುದಿನ ಮಧ್ಯಾಹ್ನದ ವರೆಗೂ ಹಾಗೆ ಜೋಡಿಸಿದ ಕೈಗಳನ್ನು ಬಿಡಲೇ ಇಲ್ಲ. ಅತ್ತಿತ್ತ ಚಲಿಸಬೇಕಾದರೆ ಸಂತಾನಂ ಮತ್ತು ಜವಾಹರಲಾಲರಿಬ್ಬರೂ ಏಳಬೇಕಿತ್ತು. ನಾಭ ಜೈಲಿನಲ್ಲಿ ಮೂರು ವಾರಗಳನ್ನು ಕಳೆದರು. ನಾಭ ಜೈಲೆಂದರೆ ಒಂದು ಹೊಲಸು ಗುಹೆಯಂತಿತ್ತು. ಒದ್ದೆಯಾದ ನೆಲ. ನಿದ್ದೆ ಹತ್ತದು. ಎಲ್ಲಿಯಾದರೂ ನಿದ್ದೆ ಹತ್ತಿತೆಂದರೆ ಮೈಮೇಲೆ ಇಲಿ, ಹೆಗ್ಗಣಗಳ ಓಡಾಟಗಳಿಂದ ಎಚ್ಚರವಾಗುತಿತ್ತು. ಈ ರೀತಿಯ ಜೈಲುವಾಸದಿಂದ ಮೂವರಿಗೂ ಟೈಫಡ್ ಜ್ವರವು ಆರಂಭವಾಯಿತು.

ಹೀಗೆ ಹೆಚ್ಚು ಕಡಿಮೆ ಹತ್ತು ಹನ್ನೆರಡು ವರುಷಗಳನ್ನು ಜೈಲು ವಾಸದಲ್ಲಿ ಕಳೆದರು. ಲಕ್ನೊ, ನಾಭ, ನೈನಿ, ಬರೈಲಿ, ಡೇರಾಡೂನ್, ಅಲಿಪುರ, ಅಲ್ಮೋಡಾ, ಅಹಮ್ಮದನಗರ ಇಷ್ಟು ಜೈಲುಗಳನ್ನೂ ಕಂಡರು. ಸ್ವರ್ಗಸಮಾನವಾದ ಸುಖಜೀವನವನ್ನು ಬಿಟ್ಟು, ನರಕದಂತಹ ಜೈಲುವಾಸಕ್ಕೆ! ಎಂತಹ ದೇಶಪ್ರೇಮ!

# ೮. ಲಾಠೀ ಬಡೆತ

ಬ್ರಿಟಿಷ್ ಸರಕಾರವು ಹಿಂದೂದೇಶದ ವಿಚಾರ ವರದಿ ಮಾಡಲು ಒಂದು ಕಮಿಷನನ್ನು ಕಳುಹಿಸಿಕೊಟ್ಟಿತು. ಕಮಿಷನ್ ಎಂದರೆ ಕೆಲವು ಮಂದಿಗಳ ಒಂದು ಮಂಡಲಿ. ಸರ್ ಜೋನ್ ಸೈಮನ್ ಎಂಬವನು ಆ ಮಂಡಲಿಯ ಅಧ್ಯಕ್ಷನು. (ಈ ಜೋನ್ ಸೈಮನನ ಜತೆಗಾರನಾಗಿ ಮೋತೀಲಾಲರು ವಕಾಲತು ಮಾಡಿದ್ದರು.) ಹಾಗಾಗಿ ಈ ಮಂಡಲಿಗೆ ಸೈಮನ್‌ಮಂಡಲಿ ಎಂದು ಹೆಸರು. ಈ ಮಂಡಲಿಯಿಂದ ಹಿಂದೂ ದೇಶಕ್ಕೆ ಪ್ರಯೋಜನವಾಗಲಾರದು ಎಂದು ಎಲ್ಲರೂ ತಿಳಿದುಕೊಂಡರು. ಆದ್ದರಿಂದ ಇವರು ಹೋದಲ್ಲೆಲ್ಲಾ ಇವರ ವಿರೋಧ ಪ್ರದರ್ಶನ ಮಾಡಬೇಕು ಎಂಬ ನಿರ್ಧಾರವಾಯಿತು. ತಮಗೆ ಬೇಡವಾದವರನ್ನು ಬಹಿಷ್ಕರಿಸುವುದು ಅಥವಾ ವಿರೋಧ ಪ್ರದರ್ಶಿಸುವುದೆಂದರೆ ಕಪ್ಪು ಬಾವುಟಗಳನ್ನು ತೋರಿಸುವುದು; ಗೊಬೇಕ್ (ಹಿಂದೆ ಹೋಗು) ಎಂದು ಘೋಷಿಸುವುದು; ಹಾಗೆಯೇ ಸೈಮನ್ ಕಮಿಷನ್ ಹೋದಲ್ಲೆಲ್ಲಾ ಈ ರೀತಿಯ ವಿರೋಧ ಪ್ರದರ್ಶನಗಳು ಜರಗಿದುವು. ಕಪ್ಪು ಪತಾಕೆಗಳನ್ನು ಹಿಡಿದುಕೊಂಡು ಜನರು ಮೆರವಣಿಗೆ ಮಾಡಿದರು. 'ಸೈಮನ್ ಗೋ ಬೇಕ್' ಎಂದು ಕೂಗಿದರು.

ಲಕ್ನೋ ಪಟ್ಟಣಕ್ಕೆ ಸೈಮನ್ ಸಮಿತಿಯು ಬಂದಾಗ ಅಲ್ಲಿನ ಜನರು ಅತ್ಯಂತ ಉತ್ಸಾಹದಿಂದ ವಿರೋಧ ಪ್ರದರ್ಶನ ಆರಂಭಿಸಿದರು. ಸರಕಾರದವರು ಅನೇಕ ಕಾನೂನುಗಳನ್ನು ಮಾಡಿದರು. ಮೆರವಣಿಗೆ ಮಾಡಬಾರದು, ಸಭೆ ಸೇರಬಾರದು ಎಂಬ ಕಾನೂನುಗಳು! ಲಕ್ನೊ ಪಟ್ಟಣದ ವಿರೋಧ ಪ್ರದರ್ಶನಕ್ಕೆ ಜವಾಹರಲಾಲರೇ ಮುಂದಾಳುಗಳು. ಸರಕಾರೀ ಸ್ಟೇಶನಿನ ಮುಂದುಗಡೆಯೇ ಇರುವ ಮೈದಾನಿನಲ್ಲಿ ಸುಮಾರು ಏಳೆಂಟು ಸಾವಿರ ಜನರ ಸಭೆ ಸೇರಿತು. ಅಷ್ಟರಲ್ಲಿ ಕುದುರೆ ಸವಾರರು ಕಾಣಿಸಿಕೊಂಡರು. ಜನರ ಮೈಮೇಲೆ ಕುದುರೆಗಳನ್ನೋಡಿಸಿದರು. ಲಾಠಿ ದೊಣ್ಣೆಗಳನ್ನು ಹಿಡಿದುಕೊಂಡು ಪೋಲೀಸರು ಕಂಡ ಕಂಡಂತೆ ಜನರಿಗೆ ಹೊಡೆಯತೊಡಗಿದರು. ಜವಾಹರಲಾಲರ ಮೈಮೇಲೆ

ಪೆಟ್ಟುಗಳ ಮಳೆಯೇ ಸುರಿಯಿತು. ಅವರಿಗೆ ಕಣ್ಣು ಕತ್ತಲೆ ಬಂತು. ಸ್ಮೃತಿ ತಪ್ಪಿತು. ಆದರೆ ಅತ್ತಿತ್ತ ಕದಲಲಿಲ್ಲ. ಪೋಲೀಸರು ಅಲ್ಲಿಂದ ಓಡದ ಜನರನ್ನು ನಿಲ್ಲಲು ಬಿಡುವಂತಿರಲಿಲ್ಲ. ಸತ್ತರೂ ಸರಿಯೆ ಹೊಡೆದು ಓಡಿಸಬೇಕೆಂದೇ ಅವರ ನಿಶ್ಚಯವಾಗಿತ್ತು. ಜವಾಹರಲಾಲರು ಓಡಲಾರರು. ಪೋಲೀಸರು ಬಡಿತಗಳನ್ನು ನಿಲ್ಲಿಸಲಾರರು. ಇನ್ನೇನು? ಜವಾಹರಲಾಲರು ಪೆಟ್ಟುತಿಂದು ಸಾಯುವುದೇ ನಿಶ್ಚಯವೆಂದಾಯಿತು. ಜವಾಹರಲಾಲರು ದೇಶಕ್ಕಾಗಿ ಸಾಯಲು ಸಿದ್ಧರಾಗಿದ್ದರು ಭರತ ಮಾತೆಯ ವೀರಪುತ್ರನಾದ ಅವರಿಗೆ ಈ ರೀತಿಯ ವೀರಮರಣವೇ ಹಿತವೆನಿಸಿರಬಹುದು. ಆದರೆ ಜನರಿಗೆ ಅವರು ಬೇಕಾಗಿದ್ದರು. ಆ ರೀತಿ ಸಾಯಬಿಡಲು ಜನರು ಸಿದ್ಧರಿರಲಿಲ್ಲ, ಹಲವು ಮಂದಿ ಮುಂದಕ್ಕೆ ನುಗ್ಗಿದರು. ಸಿಡಿಲಿನಂತೆ ಬೀಳುತ್ತಿರುವ ಪೆಟ್ಟುಗಳನ್ನು ಲೆಕ್ಕಿಸದೆ ಅವರನ್ನು ಎತ್ತಿ ದೂರಕ್ಕೆ ಒಯ್ದರು. ಭಾರತದ ಭಾಗ್ಯರತ್ನವು ಈ ರೀತಿ ಪೋಲೀಸರ ಲಾಠೀ ಬಡಿತಗಳಿಂದ ಪಾರಾಯಿತು.

## ೯. ಶಿಸ್ತು, ಸಾಹಸಗಳ ಜೀವನ

ಜವಾಹರಲಾಲರಿಗೆ ಕುದುರೆ ಸವಾರಿ ಮಾಡುವುದು, ಬೆಟ್ಟ ಪರ್ವತಗಳನ್ನೇರುವುದೆಂದರೆ ಅತಿ ಸಂತೋಷ. ಹಿಮಾಲಯ ಪರ್ವತದಲ್ಲಿರುವ ಅಮರನಾಥ ಗುಹೆಯನ್ನು ನೋಡಲು ಹೋಗಿ ಹಿಮಗುಹೆಯೊಂದರಲ್ಲಿ ಬಿದ್ದು ಹೋಗುವುದರಲ್ಲಿದ್ದರು. ಆಧಾರಕ್ಕೆಂದು ಹಗ್ಗವನ್ನು ಹಿಡಿದುಕೊಂಡದ್ದರಿಂದ ಬದುಕಿದರು.

ಎಸ್ಕಿಮೊಗಳು ಹಿಮನೆಲದ ಮೇಲೆ ಉದ್ದವಾದ ಒಂದು ರೀತಿಯ ಚಿಕ್ಕ ದೋಣಿಗಳಂತಿರುವ ಮೆಟ್ಟುಗಳಿಂದ ಜಾರುತ್ತಾ ನಡೆಯುವರಷ್ಟೆ! ಇದಕ್ಕೆ ಷಿಯಂಗ್ ಮಾಡುವುದೆಂದು ಹೆಸರು. ನೆಹರುಗಳು ಷಿಯಂಗ್ ಮಾಡುವುದರಲ್ಲಿ ಪ್ರವೀಣರು. ಸ್ವಿಜರ್ಲೆಂಡ್ ಮೊದಲಾದ ದೇಶಗಳ ಹಿಮಪ್ರದೇಶಗಳಲ್ಲಿ ಷಿಯಂಗ್ ಮಾಡಿದ್ದರು.

ಪ್ರಯಾಣ, ಸಂಚಾರಗಳಲ್ಲಿ ಜವಾಹರಲಾಲರದು ಎತ್ತಿದ ಕೈ. ಕಾಂಗ್ರೆಸ್ ಸಭೆಯ ಅಧ್ಯಕ್ಷರಾದಾಗ, ಮೊನ್ನೆ ಚುನಾವಣೆ ಪ್ರಚಾರ ನಡೆಸುವಾಗ ಸಾವಿರಾರು ಮೈಲುಗಳನ್ನು ಸುತ್ತಿರುವರು. ಕನ್ಯಾಕುಮಾರಿಯಿಂದ ಹಿಮಾಲಯದ ವರೆಗೆ ಓಡಾಡಿರುವರು. ಜನರಿಗೂ ಜವಾಹರಲಾಲರನ್ನು ಕಾಣುವುದೆಂದರೆ, ಅವರ ಭಾಷಣ ಕೇಳುವುದೆಂದರೆ ಅತ್ಯಂತ ಆನಂದ. ಜನರ ಗುಂಪು ಕೆಲವು ಭಾರಿ ದೊಡ್ಡ ಸಾಗರದಂತೆ ಸೇರುತಿತ್ತು. ಜನರನ್ನು ನಿಲ್ಲಿಸಲು ವಾಲಂಟಿಯರುಗಳು, ಪೋಲೀಸರು ಎಷ್ಟು ಪ್ರಯತ್ನ ಮಾಡಿದರೂ ಸಾಧ್ಯವಾಗುತ್ತಿರಲಿಲ್ಲ.

1945ನೇ ಇಸವಿಯಲ್ಲಿ ರೈಲು ಪ್ರಯಾಣ ಮಾಡುತಿದ್ದರು. ಈಗಿನ ರಾಷ್ಟ್ರಾಧ್ಯಕ್ಷ ಬಾಬು ರಾಜೇಂದ್ರ ಪ್ರಸಾದರೂ ಅವರ ಜತೆಯಲ್ಲಿದ್ದರು. ಜನರ ನುಗ್ಗಾಟದಿಂದ ಯಾರೋ ಬಡವನೊಬ್ಬನು ಸ್ಮೃತಿ ತಪ್ಪಿ ಬಿದ್ದು ಬಿಟ್ಟನು. ಯಾರೂ ಅವನ ಗೊಡವೆಗೆ ಹೋಗಲಿಲ್ಲ. ನೆಹರುಗಳು ಅವನನ್ನು ನೋಡಿದರು. ಕೂಡಲೇ ಅಲ್ಲಿಗೆ ಓಡಿ ಆತನಿಗೆ ಗಾಳಿ ಹಾಕಿ ಉಪಚರಿಸಿದರು. ಬಡವನು ಕಣ್ಣುಬಿಟ್ಟು ನೋಡುತ್ತಾನೆ. ಸ್ವತಹ ಜವಾಹರಲಾಲರು ತನಗೆ ಗಾಳಿ ಹಾಕುತಿದ್ದಾರೆ!

ಇದಕ್ಕಿಂತ ಕೆಲವು ವರುಷಗಳ ಹಿಂದಿನ ಸಂಗತಿ. ನೆಹರುಗಳು ರೈಲು ಮೂಲಕ ಪ್ರಯಾಣ ಮಾಡುತ್ತಿರುವರು ಎಂದು ತಿಳಿದ ಜನರು ಪ್ರತಿ ಸ್ಟೇಶನಿನಲ್ಲಿಯೂ ಗುಂಪುಕೂಡಿ ಜೈಕಾರ ಹಾಕುತಿದ್ದರು. ಜನರ ಈ ನುಗ್ಗಾಟದಿಂದ ಸ್ಟೇಶನುಗಳಲ್ಲಿ ಇಳಿಯುವ ಜನರಿಗೆ ಬಹು ಕಷ್ಟವಾಗುತಿತ್ತು. ಇಳಿದರೂ ಮುಂದಕ್ಕೆ ಸರಿಯಲು ಆಗುತ್ತಿರಲಿಲ್ಲ. ಒಂದು ಸ್ಟೇಶನಿನಲ್ಲಿ ಅಮೇರಿಕನ್ ತಾಯಿ-ಮಗಳಿಬ್ಬರು ಇಳಿದು ಮುಂದೆ ಹೋಗಲಾಗದೆ ಒಂದು ಬದಿಯಲ್ಲಿ ನಿಂತುಕೊಂಡರು. ಶಿಸ್ತು ಕ್ರಮಗಳಿಲ್ಲದೆ ಈ ರೀತಿ ಗಲಾಟೆ ಮಾಡುತ್ತಿರುವುದು ನೆಹರುಗಳಿಗೆ ಸರಿಕಾಣಲಿಲ್ಲ. ಅಷ್ಟರಲ್ಲಿ ಅಸಹಾಯಕರಾಗಿ ಅಲ್ಲಿ ನಿಂತಿದ್ದ ತಾಯಿ-ಮಗಳನ್ನು ಕಂಡರು. ಕೂಡಲೇ ರೈಲಿನಿಂದಿಳಿದು ಅವರನ್ನು ಕರೆದುಕೊಂಡು ಗೇಟು ದಾಟಿಸಿ ಬಂದರು. ರೈಲು ಹತ್ತಿ ತನ್ನ ಮುಖ ಕೂಡಾ ಜನರಿಗೆ ಕಾಣಬಾರದು ಎಂದು ಸಿಟ್ಟಿನಿಂದ ರೈಲಿನ ಕಿಟಕಿ ಬಾಗಿಲುಗಳನ್ನು ಮುಚ್ಚಿ ಬಿಟ್ಟರು.

ಒಮ್ಮೆ ಅಜಾದರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಸಭೆ ಸೇರಿತ್ತು. ಅಂದಿನ ಸಭೆಗೆ ಪತ್ರಿಕೆಗೆ ಸುದ್ದಿ ಕಳುಹಿಸುವವರು ಬರಬಾರದೆಂದು ನಿಶ್ಚಯಿಸಿದ್ದರು: ಅಧ್ಯಕ್ಷರು ಅಲ್ಲಿ ನೆರೆದಿದ್ದ ಪತ್ರಿಕಾಪ್ರತಿನಿಧಿಗಳನ್ನು "ದಯಮಾಡಿ ಹೊರಗೆ ಹೋಗಿರಿ" ಎಂದರು. ಆದರೆ ಅವರು ಒಪ್ಪಲಿಲ್ಲ. ಒಬ್ಬನಂತೂ ಅಲ್ಲೇ ಕುಳಿತುಬಿಟ್ಟನು. ಇದನ್ನು ಕಂಡು ನೆಹರುಗಳಿಗೆ ತಡೆಯಲಾಗಲಿಲ್ಲ. ಕೂಡಲೇ ಅವನನ್ನೆತ್ತಿಕೊಂಡೇ ಹೊರಗೆ ಹೋದರು. ಅಧ್ಯಕ್ಷರ ಅಪ್ಪಣೆಯನ್ನು ಪಾಲಿಸಲಿಲ್ಲವೆಂಬುದೇ ಅವರ ಸಿಟ್ಟಿಗೆ ಕಾರಣ.

ಲೇಖನ, ಭಾಷಣಗಳನ್ನು ನೆಹರುಗಳವರಿಂದ ಇತರರು ಕಲಿಯತಕ್ಕದ್ದು. 'ವೈದರ್ ಇಂಡಿಯಾ' ಎಂಬುದಾಗಿ ಪತ್ರಿಕೆಗಳಿಗೆ ಬರೆದ ಲೇಖನಗಳು ಪರದೇಶಗಳಲ್ಲಿ ಕೂಡಾ ಭಾಷಾಂತರಿಸಲ್ಪಟ್ಟವು. ಜೈಲಿನಲ್ಲಿದ್ದಾಗ ಮಗಳಿಗೆ ಬರೆದ ಚಾರಿತ್ರಿಕ ಪತ್ರಗಳು ಬಹು ಅಮೂಲ್ಯವಾದವುಗಳು. ತಾನೇ ಸ್ವತಃ ತನ್ನ ಜೀವನ ಚರಿತ್ರೆಯನ್ನು ಬರೆದಿರುವರು. ಅದನ್ನು ಪ್ರತೀ ಭಾರತೀಯನೂ ಅಗತ್ಯವಾಗಿ ಓದಬೇಕು. ಭಾಷಣಗಳಲ್ಲಿಯೂ ಹಾಗೆಯೇ ತಾಸು ತಾಸುಗಳ ವರೆಗೆ ನಿರರ್ಗಳವಾಗಿ ಮಾತಾಡಬಲ್ಲರು. ಅಮೇರಿಕಾ ದೇಶದ ಸಂಚಾರ ಸಮಯದಲ್ಲಿ ಅವರು ಮಾಡಿದ ಭಾಷಣಗಳಿಗೆ ಎಲ್ಲರೂ ತಲೆದೂಗಿದ್ದಾರೆ. ಮೊನ್ನೆಯ ಮಹಾ ಚುನಾವಣೆಯಲ್ಲಿ ಹಲವಾರು ಸ್ಥಳಗಳಲ್ಲಿ ಘಂಟೆಕಟ್ಲೆ ಭಾಷಣ ಮಾಡಿದ್ದರಿಂದಲೇ ಕಾಂಗ್ರೆಸ್ಸು ಇತರ ಎಲ್ಲಾ ಪಕ್ಷಗಳಿಗಿಂತಲೂ ಮೇಲೆನಿಸಿತು.

## ೧೦. ಭಾರತಭಾಗ್ಯವಿಧಾತ

ನೆಹರುಗಳು ಭಾರತದ ಭಾಗ್ಯರತ್ನ, ಪ್ರಪಂಚದ ಮಹಾರಾಜಕಾರಣಿಗಳ ಮಧ್ಯದಲ್ಲಿ ಶೋಭಿಸುವ ಧ್ರುವ ನಕ್ಷತ್ರ. ಅವರ ಮಾತಿಗೆ ಇಡೀ ಜಗತ್ತೇ ಮನ್ನಣೆ ಕೊಡುತ್ತಿದೆ. ಜಾತಿ ಬೇಧವಿಲ್ಲದ, ಶ್ರೀಮಂತರ ದಬ್ಬಾಳಿಕೆಯಿಲ್ಲದ, ಬಡವರ ಕಣ್ಣೀರು ಹರಿಯದ, ಅಜ್ಞಾನ ಅಶಾಂತಿಗಳಿಲ್ಲದ ಹೊಸ ಭಾರತವನ್ನು ಕಟ್ಟಲು ದಿನದ 24 ತಾಸುಗಳಲ್ಲಿ 20 ಘಂಟೆಗಳಿಗೂ ಹೆಚ್ಚು ದುಡಿಯುತಿದ್ದಾರೆ. ಕಾಂಗ್ರೆಸ್ ಸಂಸ್ಥೆಯ ಜೀವಾಳ ಅವರು. ಅವರಿಲ್ಲದ ಕಾಂಗ್ರೆಸ್ ಜಾತೀಯಕೂಟ ಅಥವಾ ಶ್ರೀಮಂತರ

ಪಕ್ಷವಾಗುವ ಹೆದರಿಕೆ ಇತ್ತು; ಇನ್ನೂ ಇರಬಹುದು. ಮೊನ್ನೆ ತಾನೆ ನಡೆದ ಮಹಾಚುನಾವಣೆಯಲ್ಲಿ "ನನ್ನ ಓಟು ನೆಹರುಗಳಿಗೆ" ಎಂದು ಎಷ್ಟು ಜನರು ಹೇಳಿಲ್ಲ?

ಮೊನ್ನೆ ನಡೆದ ಮಹಾಚುನಾವಣೆಯಲ್ಲಿ ಜವಾಹರಲಾಲರು ತುಂಬಾ ಓಟುಗಳನ್ನು ಪಡೆದು ಗೆದ್ದು ಬಂದಿರುವರು. ಅಲಹಾಬಾದ್-ಜಾನಪುರ ಎಂಬಲ್ಲಿ ಅವರು ಕೇಂದ್ರ ಸಭೆಗೆ ಉಮೇದ್ವಾರರಾಗಿದ್ದರು. ಅವರ ವಿರುದ್ಧವಾಗಿ ನಾಲ್ಕು ಮಂದಿ ಸ್ಪರ್ಧಿಸಿದ್ದರು. ಆದರೆ ಅವರೆಲ್ಲರ ಒಟ್ಟು ಮತಗಳಿಗಿಂತಲೂ ಇಮ್ಮಡಿ ಹೆಚ್ಚು ಮತಪಡೆದು ನೆಹರುಗಳು ವಿಜಯಿಗಳಾಗಿರುವರು.

ಭಾರತವು ಇದುವರೆಗೆ ಸಂಪಾದಿಸಿದುದು ಸ್ವರಾಜ್ಯ ಮಾತ್ರ. ಭಾಗ್ಯಗಳಿಂದ ಕೂಡಿರುವ ಹೊಸ ಸ್ವತಂತ್ರ ಭಾರತವು ಇನ್ನು ರೂಪುಗೊಳ್ಳಬೇಕು. ಸ್ವರಾಜ್ಯ ಸಂಪಾದನೆಯಲ್ಲಿ ಜವಾಹರಲಾಲರ ಪಾತ್ರವು ಹಿರಿದು. ಅವರ ತ್ಯಾಗವು ದೊಡ್ಡದು. ಅವರ ಸೇವೆಯು ಅಮೂಲ್ಯ. ಹಾಗೆಯೇ ಸೌಭಾಗ್ಯಮಯವಾದ ನವೀನ ಸ್ವತಂತ್ರ ಭಾರತ ನಿರ್ಮಾಣವೂ ಜವಾಹರಲಾಲರಿಂದಲೇ ಆಗಬೇಕಾಗಿದೆ; ಆಗುತ್ತಿದೆ. ಈ ಭಾರತ ಭಾಗ್ಯವಿಧಾತನು ಬಹು ಕಾಲ ಬಾಳಲಿ.

